# ಯಶವಂತ ಚಿತ್ತಾಲ

ಡಾ. ಎಫ್. ಟಿ. ಹಳ್ಳಿಕೇರಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

**Yashavantha Chittala** : By Dr. F. T. Hallikere, Published by Dr.Karigowda Beechanahalli, Director, prasaranga, Kannada University, Hampi, Vidyaranya, Kamalalpura 583221,PP : VIII + 32 Rs. 10/-

First edition 1995.

**ನಮ್ಮವರು ಪುಸ್ತಕ ಮಾಲೆ ೭**



**ಪ್ರಕಾಶಕರು**

ಡಾ. ಕರೀಗೌಡ ಬೀಚನಹಳ್ಳಿ

ನಿರ್ದೇಶಕರು, ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ಕಮಲಾಪುರ-೫೮೩ ೨೨೧.

ಬೆಲೆ : ಹತ್ತು ರೂಪಾಯಿಗಳು

**ಮುದ್ರಕರು**

ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್

8/2, ಮಾರೇನಹಳ್ಳಿ, ಮೊದಲ ಅಡ್ಡ ರಸ್ತೆ,

23ನೇ ಮುಖ್ಯ ರಸ್ತೆ, ಬೆಂಗಳೂರು - 560 078

ದೂರವಾಣಿ : 642102

# ನಿವ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ- ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಯಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು, ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪವೆಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಿರುಪುಸ್ತಿಕೆಗಳ ರೂಪದಲ್ಲಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

# ಪರಿವಿಡಿ

# ಯಶವಂತ ಚಿತ್ತಾಲ

''ಇಂದಿನ ಸಮಾಜದಲ್ಲಿ ನಾವು ಮನುಷ್ಯರಾಗಿ ಬಿಚ್ಚಿಕೊಳ್ಳಲು ಆರಿಸಿಕೊಳ್ಳಬಹುದಾದ ಜೀವಂತ ಮಾಧ್ಯಮಗಳಲ್ಲಿ ಸಾಹಿತ್ಯವೂ ಒಂದಾಗಿದೆ. ಮಾತ್ರವಲ್ಲ, ಮನುಷ್ಯ ತನ್ನ ಬದುಕಿನ ನಕಾಶೆಯಲ್ಲಿ ಮೂಡಿಸಿಕೊಳ್ಳಲೇಬೇಕಾದ ಅತ್ಯಂತ ಮೌಲಿಕ ಸಂಗತಿಗಳಲ್ಲಿ ಕೆಲವು ಸಂಗತಿಗಳು ಸಾಹಿತ್ಯದಿಂದ ಮಾತ್ರ ಒದಗಬಲ್ಲಂಥವುಗಳಾಗಿವೆ''ಎಂದು ಹೇಳಿದ ಕನ್ನಡದ ಸೃಜನಶೀಲ ಲೇಖಕ ಯಶವಂತ ಚಿತ್ತಾಲರು ತಮ್ಮ ಬದುಕು-ಬರಹಗಳೆರಡರಲ್ಲೂ ಅನ್ಯೋನ್ಯವಾದ ಸಂಬಂಧವನ್ನು ಕಂಡುಕೊಂಡವರು. ಕನ್ನಡ ಕಥಾಸಾಹಿತ್ಯವನ್ನು ವೈವಿಧ್ಯಮಯವಾಗಿ ವಿಸ್ತರಿಸುವಲ್ಲಿ ಚಿತ್ತಾಲರ ಕೊಡುಗೆ ಅಪೂರ್ವವಾದುದಾಗಿದೆ. ವೃತ್ತಿಯಿಂದ ತಂತ್ರವಿಜ್ಞಾನಿಗಳಾದ ಚಿತ್ತಾಲರು ಪ್ರವೃತಿಯಿಂದ ಮನುಷ್ಯನ ಸಂಕೀರ್ಣ ಅಸ್ತಿತ್ವವನ್ನು ಕುರಿತು ಗಾಢವಾಗಿ ಆಲೋಚಿಸುವವರಲ್ಲದೆ, ಹಲವಾರು ಅಧ್ಯಯನ ಕ್ಷೇತ್ರಗಳಲ್ಲಿ ಆಸಕ್ತಿಯನ್ನು ಬೆಳೆಯಿಸಿಕೊಂಡವರು. ಪ್ರಸ್ತುತ ಅವರ ಜೀವನ ಮತ್ತು ಸಾಹಿತ್ಯವನ್ನು ಪರಿಚಯಿಸುವುದು ಈ ಕಿರುಪುಸ್ತಕದ ಆಶಯವಾಗಿದೆ.

## ಜೀವನ ಪರಿಚಯ

ಪ್ರತಿಯೊಬ್ಬ ಮನುಷ್ಯನಿಗೂ ತನ್ನದೇ ಆದ ಹಿನ್ನೆಲೆಯೊಂದು ಇರುತ್ತದೆ. ಯಶವಂತ ಚಿತ್ತಾಲರು ವಿಶಿಷ್ಟವಾದ ಪರಿಸರದಲ್ಲಿ ಬೆಳೆದವರು. ಉತ್ತರ ಕನ್ನಡ ಜಿಲ್ಲೆಯ ಗೋಕರ್ಣ ತಾಲೂಕಿನ ಹನೇಹಳ್ಳಿ ಗ್ರಾಮದಲ್ಲಿ ೧೯೨೮ ಆಗಷ್ಟ ೩ ರಂದು ಜನಿಸಿದ ಚಿತ್ತಾಲರು, ತಮ್ಮ ಈ ಹನೇಹಳ್ಳಿಯ ಬಗೆಗೆ ಅಪಾರ ಗೌರವವನ್ನಿರಿಸಿಕೊಂಡಿರುವರು. ಅವರೇ ಒಂದೆಡೆ ''ಉತ್ತರ ಕನ್ನಡ ಜಿಲ್ಲೆ, ಅದರಲ್ಲೂ ನನ್ನ ಹುಟ್ಟೂರಾದ ಹನೇಹಳ್ಳಿ ಇವು ನನ್ನ ಮಟ್ಟಿಗೆ ಬರೇ ನೆಲದ ಹೆಸರುಗಳಲ್ಲ. ಬದಲಾಗಿ ನನ್ನ ಸಾಹಿತ್ಯದ ಹುಟ್ಟಿಗೆ ಕಾರಣವಾಗಿ, ಅದರ ಚೈತನ್ಯಕ್ಕೆ ನಿರಂತರವಾದ ಜೀವಸೆಲೆಯಾಗಿ ನಿಂತ ಮೂಲಭೂತವಾದ ಪ್ರೇರಕ ಶಕ್ತಿಗಳೂ ಆಗಿವೆಯೆಂದು ನಾನು ನಂಬಿದ್ದೇನೆ. ನನ್ನ ಮಾನಸಿಕ ಪ್ರಪಂಚದ 'ಗೆಸ್ಟಾಲ್ಟ್'(Gastalt)ನ್ನು, ಅಂದರೆ ಭಾವಪ್ರತಿಮೆಗಳ ವಿನ್ಯಾಸ ಹಾಗೂ ಭಾವನೆಗಳ ಶಿಲ್ಪಗಳನ್ನು ರೂಪಿಸಿದ ಉತ್ತುಮಿ, ಪಾರೂ, ಆಬೋಲಿನ, ಗಿರಿಯಣ್ಣ, ಪರಮೇಶ್ವರಿ, ದೇವಿ, ಮಯಶೆಟ್ಟಿ, ಬೊಮ್ಮಿ, ಎಂಕು, ಮುರ್ಕುಂಡಿ, ಬುಡಣಸಾಬ ಇವರೆಲ್ಲ ಈ ನೆಲದವರು. ಇಲ್ಲಿಯ ಬೇಲಿಗಳು:ಅಡ್ಡೆ, ಪಾಗಾರ,

ದಣಪೆಗಳು:ಮನೆ , ಗುಡಿಸಲು, ಅಂಗಳ, ಚಪ್ಪರಗಳು: ಹಿತ್ತಲು, ಗದ್ದೆ, ಬೇಣ, ಗುಂದೆ, ಗುಡ್ಡ, ಘಾಟಿಗಳು: ಓಣಿ, ಕೇರಿಗಳು; ಹೊಂಡ, ತೀರ್ಥ, ಗುಡಿ, ದೇವಸ್ಥಾನಗಳು, ಹಬ್ಬ, ತೇರು, ಬಂಡಿ, ಜಾತ್ರೆಗಳು; ಹಳ್ಳ, ಹೊಳೆ, ಕಡಲಕರೆ, ತಾರಿ, ಧಕ್ಕೆಗಳು; ಅಡವಿ, ಬೆಟ್ಟಗಳು - ಇವುಗಳೆಲ್ಲ ನನ್ನ ಸಾಹಿತ್ಯ ಕೃತಿಗಳಲ್ಲಿ ಪಾತ್ರಗಳ ಜೀವಂತ ಉಸಿರಾಟಕ್ಕೆ ಅವಶ್ಯಕವಾಗಿ ಬಂದ ಭೌತಿಕ ಪರಿಸರದ ಅಂಶಗಳು ಮಾತ್ರವಲ್ಲ, ಅದೇ ತಾನೇ ಕಣ್ಣುಬಿಡುತ್ತಿದ್ದ, ಹೆಜ್ಜೆ ಇಡುತ್ತಿದ್ದ, ತಲೆಯೆತ್ತಿ ನಿಲ್ಲುವ ಹವಣಿಕೆಯಲ್ಲಿದ್ದ ಎಳೆಯ ಜೀವಕ್ಕೆ ''ಬೆಳೆ, ಗಟ್ಟಿಯಾಗು, ಅರಳು'' ಎಂದು ಪ್ರೋತ್ಸಾಹವಿತ್ತ ಜೀವಂತ ಸಂಗತಿಗಳೂ ಆಗಿವೆಯೆಂದು ನಾನು ಭಾವಿಸಿದ್ದೇನೆ''ಎಂದು ಹೇಳಿಕೊಂಡಿದ್ದಾರೆ. ವಿಠೋಬಾ - ರುಕ್ಮಿಣಿ ದಂಪತಿಗಳ ಮಗನಾದ ಯಶವಂತ ಚಿತ್ತಾಲರು ಗಂಗಾಧರ - ದಾಮೋದರ ಎಂಬ ಸಹೋದರರನ್ನು ಹೊಂದಿದವರು. ಗಂಗಾಧರ ಚಿತ್ತಾಲರು ಕನ್ನಡ ಕವಿಗಳಲ್ಲಿ ಚಿರಪರಿಚಿತರು. ಕೊಂಕಣಿ ಇವರ ಕುಟುಂಬದ ಮಾತೃಭಾಷೆಯಾಗಿದ್ದಿತು. ಹನೇಹಳ್ಳಿ, ಕುಮಟಾ, ಧಾರವಾಡ ಮುಂಬಯಿ, ನ್ಯೂಜರ್ಸಿ (ಅಮೇರಿಕ) ಮುಂತಾದ ಕಡೆಗಳಲ್ಲಿ ಶಿಕ್ಷಣವನ್ನು ಪೂರೈಸಿ, ಈಗ ಮುಂಬಯಿಯಲ್ಲಿ ನೆಲೆನಿಂತಿದ್ದಾರೆ. ಕೆಲವು ಕಾಲ ಕಾರವಾರದ ಸಮೀಪವಿರುವ ಬಾಡಗ್ರಾಮದ ನ್ಯೂ ಇಂಗ್ಲಿಷ್ ಹಾಯ್‌ಸ್ಕೂಲ್‌ನಲ್ಲಿ ಶಿಕ್ಷಕರಾಗಿ ಸೇವೆಸಲ್ಲಿಸಿದ್ದಾರೆ. ೧೯೫೫ರಲ್ಲಿ ಮುಂಬಯಿ ವಿಶ್ವವಿದ್ಯಾಲಯದಿಂದ ಪ್ಲಾಸ್ಟಿಕ್ ತಂತ್ರವಿಜ್ಞಾನ (Plastic Technolgy) ಪದವಿ ಪರೀಕ್ಷೆಯಲ್ಲಿ ಪ್ರಥಮ ಸ್ಥಾನವನ್ನು ಗಳಿಸುವುದರೊಂದಿಗೆ ಸುವರ್ಣ ಪದಕವನ್ನು ತಮ್ಮದಾಗಿಸಿಕೊಂಡರು. ಮುಂಬಯಿಯ ಬೇಕಲೈಟ್ ಹೈಲಂ ಲಿಮಿಟೆಡ್ ಸಂಸ್ಥೆಯಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ, ಈಗ ನಿವೃತ್ತಿಯನ್ನು ಹೊಂದಿದ್ದಾರೆ. ಕೆಲವು ಕಾಲ Indian Institute of Technology ಹಾಗೂ plastics & Rubber Institute ಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ೧೯೭೨ರಲ್ಲಿ ಅಮೆರಿಕೆಯ Stevan Institute of Technologyಯಲ್ಲಿ Chemical Engereeringದಲ್ಲಿ ಸ್ನಾತಕೋತ್ತರ ಪದವಿಪಡೆದು, ಯುರೋಪ, ಇಂಗ್ಲಂಡ, ಜಪಾನ ಹಾಗೂ ಮದ್ಯಪೂರ್ವದೇಶಗಳಲ್ಲಿ ಉನ್ನತ ವ್ಯಾಸಂಗವನ್ನು ಪೂರೈಸಿದ್ದಾರೆ. ಹೀಗೆ ವಿಜ್ಞಾನ ಕ್ಷೇತ್ರದಲ್ಲಿ ಆಸಕ್ತಿಯನ್ನು ಹೊಂದಿದವರು ಸಾಹಿತ್ಯದತ್ತ ತಮ್ಮ ಒಲವನ್ನು ತೋರಿಸಿದ್ದು ಅಣ್ಣಂದಿರಾದ ದಾಮೋದರ ಹಾಗೂ ಗಂಗಾಧರರ ಮುಖಾಂತರ. ಉತ್ತರ ಕನ್ನಡದ ಬುದ್ಧಿಜೀವಿ ಗೌರೀಶ ಕಾಯ್ಕಿಣಿ , ಗೆಳೆಯ ಶಾಂತಿನಾಥ ದೇಸಾಯಿಯವರ ಪ್ರಭಾವಗಳು ಇವರು ಸಾಹಿತಿ, ಲೇಖಕರಾಗಿ ಬೆಳೆಯಲು ಸಹಾಯಕಾರಿಯಾದವು.

ಚಿಕ್ಕಂದಿನಲ್ಲಿ ನೀರು ಬಣ್ಣಗಳಿಂದ ಚಿತ್ರಬಿಡಿಸುವುದು. ಮನೆಯವರ, ನೆರೆಮನೆಯವರ ಧ್ವನಿಯನ್ನು, ಮಾತನಾಡುವ ರೀತಿಯನ್ನು ಅನುಕರಣೆ (Mimicry) ಮಾಡುವುದು ಅವರ ಹವ್ಯಾಸಗಳಲ್ಲಿ ಮುಖ್ಯವಾಗಿದ್ದವು. ಚಿತ್ರಕಲೆಯಲ್ಲಿ ವಿಶೇಷ ಪರಿಣತಿ ಪಡೆಯಬೇಕೆಂಬ ಉದ್ದೇಶದಿಂದ ಮುಂಬಯಿಗೆ ಹೋಗಿ 'ಕಲಾನಿಕೇತನ'ದ ಸಂಜೆ ತರಗತಿಗಳಿಗೆ ಸೇರಿದರು. ಮುಂದೆ ಬರುಬರುತ್ತಾ ಎಂ. ಎನ್. ರಾಯ್ ಅವರ ವಿಚಾರಗಳಿಗೆ ಆಕರ್ಷಿತರಾಗಿ, ರ್‍ಯಾಡಿಕಲ್ ಡೆಮೊಕ್ರಾಟಿಕ್ ಪಾರ್ಟಿಯ ಸದಸ್ಯತ್ವವನ್ನು ಪಡೆದುಕೊಂಡರು. ನವಮಾನವತಾವಾದದ ಮಾರ್ಗವಾಗಿ ಮಾರ್ಕ್ಸ್, ಎರಿಕ್‌ಫ್ರಾಂ,

ಹಕ್ಸ್ಲಿ, ಎಡಿಂಗಟನ್, ಫ್ರಾಯ್ಡ್, ಎಡ್ಲರ್ ಮೊದಲಾದ ವಿಚಾರವಾದಿಗಳ ತತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು.

ಬೇಕಲೈಟ್ ಹೈಲಂ ಲಿಮಿಟೆಡ್ ಸಂಸ್ಥೆಯಲ್ಲಿ ಸುಮಾರು ೩೦ ವರ್ಷಗಳಿಗೂ ಮೀರಿದ ಸುದೀರ್ಘವಾದ ಸೇವೆಯು ಅವರಿಗೆ ಬಂಡವಾಳಶಾಹಿ ಮತ್ತು ಕೈಗಾರಿಕಾ ವಲಯದ ನಿಕಟವಾದ ಪರಿಚಯವನ್ನು ತಂದುಕೊಟ್ಟಿತು. ಡಾ. ಎಚ್. ಎಸ್. ರಾಘವೇಂದ್ರರಾವ್ ಅವರು ಹೇಳುವಂತೆ ''ಹನೇಹಳ್ಳಿಯ ಹಸಿರು ತುಂಬಿದ ಪರಿಸರದಿಂದ ಸೃಜನಶೀಲ ಚೈತನ್ಯದ ಬುತ್ತಿ ಹೊತ್ತು ತಂದ ತರುಣನಿಗೆ ಮುಂಬಯಿಯೆಂಬ ನಗರ ರಾಕ್ಷಸನೊಂದಿಗೆ ಆದ ಮುಖಾಮುಖಿ ಹುಟ್ಟಿಸಿದ ತಲ್ಲಣಗಳು ಅವರ ಬರವಣಿಗೆಯ ಹಲವು ಕಾಳಜಿಗಳಿಗೆ ಕಾರಣವಾದವು. ವೈಯಕ್ತಿಕ ಜೀವನದಲ್ಲಿ ಹಾಗೂ ಉದ್ಯೋಗದಲ್ಲಿ ಅನುಭವಿಸಿದ ಹಲವು ದುರಂತಗಳು ಹಾಗೂ ಬಿಕ್ಕಟ್ಟುಗಳು ಅವರ ಬರವಣಿಗೆಯ ಸ್ವರೂಪವನ್ನು ನಿರ್ಧಾರ ಮಾಡಿದ ಸಂಗತಿಗಳಾದಂತೆಯೇ ಅವೆಲ್ಲದರ ನಡುವಿನಿಂದ, ಜೀವನ ಶ್ರದ್ಧೆಯೇ ಅಡಿಗಲ್ಲಾದ ಆತ್ಮವಿಶ್ವಾಸವನ್ನು ತಂದುಕೊಟ್ಟವು.''

ಚಿತ್ತಾಲರು ಬರವಣಿಗೆಯನ್ನು ಪ್ರಾರಂಭಿಸುವುದು ಪ್ರತಿದಿನ ಬೆಳಗಿನ ೪.೩೦ಕ್ಕೆ. ಅದಕ್ಕೆ ಅವರು ಎರಡು ಕಾರಣಗಳನ್ನು ಕೊಡುತ್ತಾರೆ. ಮೊದಲನೆಯದಾಗಿ ಈ ಸಮಯದಲ್ಲಿ ತಾಜಾ ಆಗಿರುವ ಮನಸ್ಸು ಸೃಷ್ಟಿಕ್ರಿಯೆಗೆ ಪಕ್ಕಾಗಿರುತ್ತದೆ. ಎರಡನೆಯದಾಗಿ ಹೊರಗಿನ ಕತ್ತಲೆಯೂ ಇಂಥದಕ್ಕೆ ಅತ್ಯವಶ್ಯವಾದ ಹಿನ್ನೆಲೆಯಾಗಿ ಕೆಲಸಮಾಡುತ್ತದೆ.

ಮಾಸ್ತಿಯವರ ಸಂಪ್ರದಾಯದಲ್ಲಿ ಬರವಣಿಗೆಯನ್ನು ಪ್ರಾರಂಭಿಸಿದ ಚಿತ್ತಾಲರು ನವ್ಯಪಂಥದ ಪ್ರಯೋಗಶೀಲ ಲೇಖಕರಾಗಿ, ಬರುಬರುತ್ತ ಜನಪ್ರಿಯ ಲೇಖಕರಾಗಿಯೂ ಮನ್ನಣೆಯನ್ನು ಗಳಿಸಿದ್ದಾರೆ. ''ಮಾಸ್ತಿಯವರ ಸಂಪ್ರದಾಯ ದಲ್ಲಿಯೇ, ಅವರ ಪ್ರಭಾವದಿಂದಾಗಿ ಕಥೆ ಬರೆಯಲಿಕ್ಕೆ ಆರಂಭಿಸಿದ್ದು. ನನ್ನ ಇಂದಿನವರೆಗಿನ ಎಲ್ಲಾ ಸಾಹಿತ್ಯದ ಮೇಲೆ ಮಾಸ್ತಿಯವರ ಗಾಢಪ್ರಭಾವವಿದೆಯೆಂದು ಒಪ್ಪಿಕೊಳ್ಳುತ್ತೇನೆ. ಅಲ್ಲದೇ ಕುವೆಂಪು , ಶಿವರಾಮ ಕಾರಂತ, ಬೇಂದ್ರೆ, ಅಡಿಗ ಅವರಿಂದಲೂ ಪ್ರಭಾವ ಪಡೆದಿದ್ದೇನೆ''ಎಂದು ಹೇಳಿಕೊಂಡಿರುವ ಚಿತ್ತಾಲರು, ದಸ್ತಾವಸ್ಕಿ, ಚೆಕಾವ್, ಕಾಫ್ಕಾ, ಆಲ್ಬರ್ಟಕಾಮೂ, ಐಝಾಕ್ ಸಿಂಗರ್, ಮಾರ್ಕ್ವೆಜ್ ಮುಂತಾದ ಪಾಶ್ಚಾತ್ಯ ಲೇಖಕರನ್ನು ಮೆಚ್ಚಿಕೊಂಡಿದ್ದಾರೆ.

೧೯೪೪ರಲ್ಲಿ 'ಬೊಮ್ಮಿಯ ಹುಲ್ಲು ಹೊರೆ 'ಎಂಬ ಮೊದಲ ಕಥೆಯಿಂದ ಪ್ರಾರಂಭವಾದ ಇವರ ಸಾಹಿತ್ಯ ಕೃಷಿ ಕಥೆ, ಕಾದಂಬರಿ, ವೈಚಾರಿಕ ಲೇಖನಗಳಿಂದ ಕೂಡಿದೆ. ಇಷ್ಟಾಗಿಯೂ ಇನ್ನೂ ಮುಗಿಯದ ನವ್ಯಯುಗದಲ್ಲಿ ಚಿತ್ತಾಲರು ಹೊಸ ಹೊಸ ಪ್ರಯೋಗಗಳನ್ನು ನಡೆಸುತ್ತಾ ಸಾಹಿತ್ಯ ಕೃಷಿಯಲ್ಲಿ ತೊಡಗಿರುವುದು ಆರೋಗ್ಯ ಪೂರ್ಣವಾಗಿದೆ. ಇವರ ಸಾಹಿತ್ಯಕೃಷಿಯನ್ನು ಗುರುತಿಸಿ ಹಲವಾರು ಸಂಘ ಸಂಸ್ಥೆಗಳು

ಗೌರವ ಪ್ರಶಸ್ತಿಗಳನ್ನು ನೀಡಿವೆ. ಕನ್ನಡ ಸಾಹಿತ್ಯ ಪರಿಷತ್ತು ಉತ್ತರ ಕನ್ನಡ ಜಿಲ್ಲೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ ನೀಡಿ ಪುರಸ್ಕರಿಸಿದೆ. ಶಿಕಾರಿ ಕಾದಂಬರಿಯು ಶ್ರೇಷ್ಠ ಸೃಜನಶೀಲ ಕೃತಿಯೆಂದು ಪರಿಗಣಿಸಿ ೧೯೭೯ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಪ್ರಶಸ್ತಿಯನ್ನು ನೀಡಿದೆ. ಕತೆಯಾದಳು ಹುಡುಗಿ ಕಥಾಸಂಕಲನಕ್ಕೆ ೧೯೮೦ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೮೩ ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ನೀಡಿವೆ. ೧೯೮೩ರಲ್ಲಿ ವರ್ಧಮಾನ ಸಾಹಿತ್ಯ ಪ್ರಶಸ್ತಿ ಹಾಗೂ ೧೯೯೨ರಲ್ಲಿ ಮಾಸ್ತಿವೆಂಕಟೇಶ ಅಯ್ಯಂಗಾರ್ ಪ್ರಶಸ್ತಿಗಳು ಸಹ ಸಂದಿರುವುದು ಚಿತ್ತಾಲರ ಸಾಹಿತ್ಯ ಶ್ರೇಷ್ಠತೆಯನ್ನು ಎತ್ತಿ ಹೇಳುತ್ತವೆ. ಇವರ ಹಲವು ಕಥೆಗಳು ಮತ್ತು 'ಮೂರುದಾರಿಗಳು'ಕಾದಂಬರಿ ಚಲನಚಿತ್ರಗಳಾಗಿ ಮೂಡಿಬಂದಿವೆ

ತಮ್ಮ ಬದುಕು ಮತ್ತು ಸಾಹಿತ್ಯಗಳೆರಡರಲ್ಲಿ ಅನನ್ಯವಾದ ಸಂಬಂಧವನ್ನು ಕಂಡುಕೊಂಡ ಚಿತ್ತಾಲರು 'ನಾನೇಕೆ ಬರೆಯುತ್ತೇನೆ?' ಎಂಬ ಪ್ರಶೆಗೆ ಕೆಳಗಿನಂತೆ ಉತ್ತರಿಸುತ್ತಾರೆ: ''ಒಟ್ಟಿನಲ್ಲಿ , ನಾನು ಬರೆಯುತ್ತಿದ್ದದ್ದು ನಾನು ನಾನೇ ಆಗಲು. ನಾನು ನಾನಾಗಿಯೇ ಉಳಿದು ಉಳಿದವರೊಂದಿಗೆ ಬರೆಯಲು, ಪ್ರೀತಿಸಲು, ಪ್ರೀತಿಸುವುದನ್ನು ಕಲಿಯಲು, ಪ್ರೀತಿಸುವುದರ ಮೂಲಕ ಜೀವಂತ ಸಂಬಂಧಗಳನ್ನು ಹುಟ್ಟಿಸಿಕೊಳ್ಳಲು, ಉಳಿದವರನ್ನು ತಿದ್ದುವುದಕ್ಕಲ್ಲ. ಆ ಯೋಗ್ಯತೆಯಾಗಲೀ ಅಧಿಕಾರವಾಗಲೀ ನನಗಿಲ್ಲ.'' ಹೀಗೆ ಚಿತ್ತಾಲರು ಸಾಹಿತ್ಯದ ಮಹತ್ವವನ್ನು ಗುರುತಿಸಿ, ಅದರೊಂದಿಗೆ ಬೆರೆತುಕೊಂಡಿರುವುದು ನಮಗೆ ತಿಳಿದು ಬರುತ್ತದೆ.

# ಕೃತಿಗಳ ಪರಿಚಯ

'ಬೊಮ್ಮಿಯ ಹುಲ್ಲು ಹೊರೆ'ಎಂಬ ಕಥೆಯಿಂದ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದ ಚಿತ್ತಾಲರು ಇಲ್ಲಿಯವರೆಗೆ ಆರು ಕಥಾಸಂಕಲನಗಳು, ಐದು ಕಾದಂಬರಿಗಳು ಮತ್ತು 'ಸಾಹಿತ್ಯ, ಸೃಜನಶೀಲತೆ ಮತ್ತು ನಾನು' ಎಂಬ ಪ್ರಬಂಧಸಂಕಲನವನ್ನು ಪ್ರಕಟಿಸಿದ್ದಾರೆ.

**ಕಥಾಸಂಕಲನಗಳು :** ಯಶವಂತ ಚಿತ್ತಾಲರು ಕಥೆಗಾರರಾಗಿ ನಮಗೆ ಪ್ರಮುಖರಾಗಿ ಕಾಣುತ್ತಾರೆ. ಸಂದರ್ಶನ, ಆಬೋಲಿನ, ಆಟ, ಕತೆಯಾದಳು ಹುಡುಗಿ, ಬೇನ್ಯಾ, ಸಿದ್ಧಾರ್ಥ ಕಥಾ ಸಂಕಲನಗಳು ಪ್ರಕಟವಾಗಿವೆ. ೧೯೮೩ರಲ್ಲಿ ಬಂದ ಅವರ 'ಸಮಗ್ರ ಕಥೆಗಳು' ಗ್ರಂಥದಲ್ಲಿ ಮೊದಲ ನಾಲ್ಕು ಕಥಾಸಂಕಲನಗಳು ಮತ್ತು 'ಬೇನ್ಯಾ'ಸಂಗ್ರಹದಲ್ಲಿನ ಎರಡು ಕಥೆಗಳು ಒಟ್ಟು ಮೂವತ್ತು ಮೂರು ಕಥೆಗಳು ಸಂಗ್ರಹಗೊಂಡಿವೆ. 'ಹೃದಯವುಳ್ಳ ಹಾದಿಯಲ್ಲಿ'ಯೆಂಬ ಮುನ್ನುಡಿ ರೂಪದ ಪ್ರಸ್ತಾವನೆಯನ್ನು ಚಿತ್ತಾಲರು ಈ ಕೃತಿಯ ಆರಂಭದಲ್ಲಿ ಹೇಳಿದ್ದಾರೆ. ಇಲ್ಲೆಲ್ಲ ಅವರ ಜೀವನ, ಸಾಹಿತ್ಯದ ಬಗೆಗಿನ ಅಂಶಗಳನ್ನು ಕಾಣುತ್ತೇವೆ. ಈಗ ಆರು ಕಥಾಸಂಕಲನಗಳ ಬಗೆಗೆ ಸ್ಥೂಲವಾಗಿ ಪರಿಚಯಿಸಲಾಗುವುದು.

### ೧. ಸಂದರ್ಶನ

೧೯೫೭.ರಲ್ಲಿ ಪ್ರಕಟವಾದ ಈ ಸಂಕಲನ ಚಿತ್ತಾಲರ ಮೊದಲ ಗ್ರಂಥ. ಉತ್ತುಮಿ, ಕಳ್ಳಗಿರಿಯಣ್ಣ, ಬೊಮ್ಮಿಯ ಹುಲ್ಲು ಹೊರೆ, ತಪ್ಪಿದಗುರಿ, ಗುಂಡಾಭಟ್ಟರ ಮಡಿ, ಒಂದು ತತ್ವದ ಸಲುವಾಗಿ, ಮುಕುಂದನ ದಾಕ್ಷಿಣ್ಯ, ಸಂದರ್ಶನ ಹೀಗೆ ಒಂಬತ್ತು ಕಥೆಗಳು ಇಲ್ಲಿವೆ. ಉತ್ತರ ಕನ್ನಡ ಜಿಲ್ಲೆಯ ಹನೇಹಳ್ಳಿಯ ಸಾಮಾಜಿಕ ಪರಿಸರ, ಅಲ್ಲಿನ ವ್ಯವಸ್ಥೆ ಮಾನವೀಯ ಮೌಲ್ಯ, ನಡೆಯುತ್ತಿರುವ ದೌರ್ಜನ್ಯ, ಶೋಷಣೆಗಳನ್ನು ಈ ಕಥೆಗಳು ನಿರೂಪಿಸುತ್ತವೆ. ಬೊಮ್ಮಿಯ ಹುಲ್ಲು ಹೊರೆ ಶೋಷಣೆಗೊಳಗಾದವಳೊಬ್ಬಳ ಕಥೆಯನ್ನು ಹೇಳುತ್ತದೆ. ಬೊಮ್ಮಿಯ ಜೊತೆಗೆ ಆತ್ಮೀಯತೆಯಿಂದಲೇ ಮಾತನಾಡುತ್ತ ಹುಲ್ಲು ಹೊರೆಯನ್ನು ಕಡಿಮೆ ಬೆಲೆಗೆ ಕೊಳ್ಳುವುದಲ್ಲದೆ, ಮನೆಯ ಕೆಲಸವನ್ನು ಮಾಡಿಸಿಕೊಂಡು, ನಾಯಿ ಬಾಯಿ ಹಾಕಿದ ಅನ್ನವನ್ನು ಬೊಮ್ಮಿಗೆ ಶಂಕರರಾಯರ ಪತ್ನಿ ಕೊಡುತ್ತಾಳೆ. ತಾನು ಶೋಷಣೆಗೆ ಒಳಗಾಗುತ್ತಿರುವ ಅರಿವು ಬೊಮ್ಮಿಗೆ ಇಲ್ಲದಿರುವುದು ಇಲ್ಲಿ ಕಂಡು ಬರುತ್ತದೆ. ಹೇಗಾದರೂ ಮಾಡಿ ತಮ್ಮ ಮಕ್ಕಳಿಗೆ ಮದುವೆ ಮಾಡಬೇಕೆಂಬ ತಾಯಂದಿರ ಕಳಕಳಿಯನ್ನು 'ತಪ್ಪಿದ ಗುರಿ' ಕಥೆ ಚಿತ್ರಿಸುತ್ತದೆ. ಅತಿಯಾದ ಮಡಿಯ

ಆಚರಣೆಯಿಂದಾಗಿ ಗುಂಡಾಭಟ್ಟರು ಅವರ ಆರು ವರ್ಷದ ಮಗನಿಂದಾಗಿ ಊರಿನವರೆಲ್ಲರ ಹಾಸ್ಯಕ್ಕೆ ಗುರಿಯಾಗುವುದನ್ನು 'ಗುಂಡಾಭಟ್ಟರ ಮಡಿ' ನಿರೂಪಿಸುತ್ತದೆ. ಹೀಗೆ ಹಾಸ್ಯ, ವಿನೋದ, ಸಾಮಾಜಿಕ ಜನಜೀವನ, ಶೋಷಣೆ ಮುಂತಾದವುಗಳನ್ನು ಈ ಸಂಕಲನದ ಕಥೆಗಳು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. ತುಂಬ ಸ್ವಾರಸ್ಯಕರವಾಗಿ, ಓದುಗರಿಗೆ ರಸವತ್ತಾಗುವಂತೆ ಕಥೆಗಳನ್ನು ಲೇಖಕರು ಹೇಳಿದ್ದಾರೆ.

## ೨. ಆಬೋಲಿನ

೧೯೬೦ರಲ್ಲಿ ಪ್ರಕಟವಾದ ಈ ಸಂಕಲನದಲ್ಲಿ ಆಬೋಲಿನ, ಮುದಿಹುಚ್ಚು, ರಾಧಕ್ಕನ ಮನೋರಥ, ಅಡ್ಡಬಿದ್ದಮರ, ಖಾಲಿಕೋಣೆ, ಅಪರಿಚಿತರು, ಮಲ್ಲಿನಾಥ, ಗಾನಪ್ರಿಯ ಶಂಭುಶಾಸ್ತ್ರಿ ಎಂಬ ಎಂಟು ಕಥೆಗಳಿವೆ. ಹಳ್ಳಿಯ ಹುಡುಗಿಯೊಬ್ಬಳ ಅಪವಾದದ ದಾರುಣ ಕಥೆಯನ್ನು 'ಆಬೋಲಿನ' ನಿರೂಪಿಸುತ್ತದೆ. ಷೋಡಶಿಯೊಬ್ಬಳು ವಯಸ್ಸಿಗೆ ಸಹಜವಾದ ಹಗಲುಗನಸನ್ನು ಕಾಣುವದನ್ನು ಸುಂದರವಾಗಿ 'ಖಾಲಿಕೋಣೆ' ಕಥೆ ಚಿತ್ರಿಸುತ್ತದೆ. ಅಕ್ಕನ ಬಾಣಂತತನಕ್ಕೆಂದು ಬಂದ ನಿರ್ಮಲೆ ತನ್ನ ಮನೆಯ ಪಕ್ಕದ ಖಾಲಿಕೋಣೆಗೆ ಬಾಡಿಗೆಗೆ ಬರಲಿರುವ ಯುವಕನ ಬಗೆಗೆ ಹಲವಾರು ಕನಸುಗಳನ್ನು ಕಾಣುತ್ತಿರುತ್ತಾಳೆ. ಅವನು ಕೋಣೆಗೆ ಬರುವ ಮುಂಚೆಯೇ ತೀರಿಕೊಂಡಾಗ ತನ್ನ ಪ್ರಿಯಕರನನ್ನೆ ಕಳೆದುಕೊಂಡವಳಂತೆ ಬಿಕ್ಕಿ ಬಿಕ್ಕಿ ಅಳುತ್ತಾಳೆ. ಪ್ರಿಯಕರನಿಗಾಗಿ (ಅನಂತ) ಹಾತೊರೆಯುವ ಅವಳ ಹೃದಯದ ಕೋಣೆ ಖಾಲಿಯಾಗಿಯೇ ಉಳಿಯುತ್ತದೆ. ಅಂತರ್ಜಾತೀಯ ಪ್ರೇಮ ವಿವಾಹವನ್ನು ಕುರಿತಂತೆ 'ಅಡ್ಡಬಿದ್ದಮರ' ವಿವರಿಸುತ್ತದೆ. ರಸ್ತೆಗೆ ಅಡ್ಡಲಾಗಿ ಬಿದ್ದಮರ ಸುರೇಶ ಮತ್ತು ನಿರ್ಮಲೆಯರ ಪ್ರೇಮವಿವಾಹದ ದಾರಿಗೆ ಅಡ್ಡವಾಗಿದ್ದ ನಿರ್ಮಲೆಯ ಅಜ್ಜಿಯ ಸಂಕೇತವಾಗಿ ಬಂದಿದೆ. ಜೀವನವನ್ನು ಕುರಿತ ಲವಲವಿಕೆಯ ಅಂಶಗಳನ್ನು ಇಲ್ಲಿನ ಕಥೆಗಳಲ್ಲಿ ಕಾಣಬಹುದು.

## ೩. ಆಟ

೧೯೬೮ ರಲ್ಲಿ ಬಂದ ಈ ಸಂಕಲನದಲ್ಲಿ ಸೆರೆ, ಹಾವು, ಅದೃಷ್ಟ, ಪಯಣ, ಆಟ, ಛಲ ಎಂಬ ಆರು ಕಥೆಗಳಿವೆ. ಕಾಮ, ಸಾವುಗಳನ್ನು ಕುರಿತಂತೆ ಇಲ್ಲಿಯ ಕಥೆಗಳು ನಿರೂಪಿಸುತ್ತವೆ. ಕಾಮವಸ್ತುವನ್ನುಳ್ಳ ಸೆರೆ ಕಥೆಯು ಈ ಸಂಕಲನದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಮದುವೆಯ ಪ್ರಸ್ತಾಪದ ಮಾತುಗಳಿಂದ ದೂರ ಹೋಗಬೇಕೆಂದು ಬರ್ಮಾಚಾರಿ ಹಳೆ ಮನೆಯ ಬಾಗಿಲನ್ನು ರಿಪೇರಿ ಮಾಡಲು ಹೋಗುತ್ತಾನೆ. ದಾರಿಯಲ್ಲಿ ಹೊನ್ನಪ್ಪಾಚಾರಿಯ ಮನೆಯಿಂದ ಗರಗಸವನ್ನು ತರಲು ಹೋಗಿ, ಅವನ ಹೆಂಡತಿಯ ಆಂಗಿಕ ಚೇಷ್ಟೆಗಳಿಗೆ ಮುಜುಗರ ಪಟ್ಟುಕೊಳ್ಳುತ್ತಾನೆ. ಮನೆಯ ಬಾಗಿಲನ್ನು ರಿಪೇರಿ ಮಾಡುತ್ತ, ತಾನೇ ಮನೆಯೊಳಗೆ ಬಂದಿಯಾಗುತ್ತಾನೆ ಬರ್ಮಾಚಾರಿ. ಕೊನೆಗೆ ರಿಪೇರಿ ಮಾಡಿದ ಬಾಗಿಲನ್ನೇ ಮತ್ತೆ ಕಿತ್ತು ಹೊರಬರಬೇಕೆನ್ನುವಷ್ಟರಲ್ಲಿಯೇ, ಮನೆಯ ಹೊರಗಿನಿಂದ ದೇವಿ ಬಂದು ಈತನನ್ನು

ತಬ್ಬಿಕೊಳ್ಳುತ್ತಾಳೆ. ಬರ್ಮಾಚಾರಿ ಯಾವುದರಿಂದ ದೂರವಿರಬೇಕೆಂದು ಯೋಚಿಸಿದ್ದನೋ ಆ ಕಾಮಕ್ಕೆ ಸಿಕ್ಕಿಕೊಳ್ಳುವುದನ್ನು 'ಸೆರೆ' ಕಥೆಯು ಚಿತ್ರಿಸುತ್ತದೆ. 'ಅದೃಷ್ಟ' ಕಥೆಯು ಮೈಲಿಬೇನೆಗೆ ತುತ್ತಾಗಿ ಸಾವಿನ ಹತ್ತಿರ ಹೋಗಿದ್ದ ಹನ್ನೆರಡು ವರ್ಷದ ಬಾಲಕ ನೀಲಕಂಠ ಉಳಿದುಕೊಳ್ಳುವುದು, ಜೀವಾವಧಿಶಿಕ್ಷೆ ಅನುಭವಿಸಿ ಗೋವೆಯಿಂದ ತಂದೆ ತಾಯಿಯರನ್ನು ಕಾಣಲು ಬಂದ ಪೊಕ್ಕನ ಅಣ್ಣ ಮೈಲಿ ಬೇನೆಗೆ ತುತ್ತಾಗಿ ಸಾಯುವುದು ಸಾವಿನ ನಿಗೂಢತೆಯ ಕಡೆಗೆ ಬೆರಳು ಮಾಡಿ ತೋರಿಸುತ್ತದೆ. ಸುಳಿವು ಹತ್ತಿದ ಸಾವಿನ ಅಸ್ಪಷ್ಟ ಭೀತಿಯಿಂದ ಅಸಾಧ್ಯವಾದರೂ ಪಾರಾಗಲು ಬಯಸಿ ವಿಫಲಗೊಳ್ಳುವ ಮನಸ್ಸಿನ ವಿಚಿತ್ರ ಸ್ಥಿತಿಯನ್ನು 'ಆಟ'ವು ನಿರೂಪಿಸುತ್ತದೆ. ಸಾವಿನ ಮುನ್ಸೂಚನೆಯನ್ನು ಕುರಿತು ಪಯಣ ಕಥೆ ಹೇಳುತ್ತದೆ. ಹೀಗೆ ಸಾವು, ಕಾಮ, ಮೃತ್ಯು, ಪ್ರಜ್ಞೆಯನ್ನು ಕುರಿತು ಇಲ್ಲಿನ ಕಥೆಗಳು ಜಿಜ್ಞಾಸೆಗೈದಿವೆ.

## ೪. ಕತೆಯಾದಳು ಹುಡುಗಿ

೧೯೮೦ರಲ್ಲಿ ಬಂದ ಈ ಸಂಕಲನ ಕನ್ನಡ ಕಥಾ ಸಾಹಿತ್ಯದ ಪ್ರಮುಖ ಕೃತಿಗಳಲ್ಲಿ ಒಂದೆಂದು ಈಗಾಗಲೇ ಪರಿಗಣಿತವಾಗಿದೆ. ಇದರಲ್ಲಿ ಎಂಟು ಕಥೆಗಳಿದ್ದು, ಅವು ವರ್ತಮಾನ, ಇತಿಹಾಸ, ಪುರಾಣ ಎಂಬ ಮೂರು ಭಾಗಗಳಲ್ಲಿ ಚೆದುರಿವೆ. ಸಾಹಿತ್ಯ ಹಾಗೂ ಬದುಕು ಒಂದನ್ನೊಂದು ಸಂಧಿಸುವ, ಒಂದು ಇನ್ನೊಂದರಲ್ಲಿ ಹಾಸು ಹೊಕ್ಕಾಗುವ ಪ್ರಕ್ರಿಯೆಯ ಸಂದಿಗ್ಧತೆಯನ್ನು ಕತೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ ಕಥೆ ವಿವರಿಸುತ್ತದೆ. ಒಂದು ಸಮಾಜದ ವ್ಯವಸ್ಥೆಯ ದುರಂತವನ್ನು ಕತೆಯಾದಳು ಹುಡುಗಿ ನಿರೂಪಿಸುತ್ತದೆ. ಈ ಕಥೆ ತನ್ನ ಕಥಾತಂತ್ರದ ಕೌಶಲ್ಯದಿಂದಾಗಿಯೂ ಮುಖ್ಯವಾಗಿ ಕಂಡು ಬರುತ್ತದೆ. ಒಬ್ಬ ನಿರಪರಾಧಿಯ ದುರಂತ ಪ್ರಸಂಗವನ್ನು ತ್ರಯೋದಶಪುರಾಣವು ಹೇಳುತ್ತದೆ. ಮನುಷ್ಯರೊಡನೆ ಜೀವಂತ ಮಾನವ ಸಂಬಂಧಗಳನ್ನು ಸ್ಥಾಪಿಸಿಕೊಳ್ಳಲಾಗದ ಸ್ಥಿತಿ ಸಾವಿಗೆ ಸಮಾನವೆಂಬುದನ್ನು ಬೀಗ ಮತ್ತು ಬೀಗದ ಕೈ ಕಥೆಯು ಧ್ವನಿಸುತ್ತದೆ. ಹದಿಮೂರನೆಯ ಸಂಖ್ಯೆ ಈ ಸಂಕಲನದಲ್ಲಿ ಅಶುಭದ ಸಂಕೇತವಾಗಿ ಬಂದಿದೆ. ಚಿತ್ತಾಲರ ಆತ್ಮ ಚರಿತ್ರೆ ವೈಯಕ್ತಿಕ ಬದುಕಿನ ಅಂಶಗಳನ್ನು ಇಲ್ಲಿಯ ಕಥೆಗಳಲ್ಲಿ ಕಾಣಬಹುದು.

## ೫. ಬೇನ್ಯಾ

೧೯೮೬ರಲ್ಲಿ ಬಂದ ಈ ಸಂಕಲನ ಸಾವಿತ್ರಿ, ನನ್ನ ತಮ್ಮನ ಕಥೆ, ನೀವೇ ಬರೆಯಬೇಕಾಗಿದ್ದ ಕಥೆ, ಬೇನ್ಯಾ, ಅಪಘಾತ, ಒಂದು ಹೆಸರಿನ ಕಥೆ ಎಂಬ ಆರು ಕಥೆಗಳನ್ನೊಳಗೊಂಡಿದೆ. ಬಾಲ್ಯದಲ್ಲಿ ಜೊತೆಗೂಡಿ ಆಟವಾಡಿದ ಗೆಳೆಯರಿಬ್ಬರ ಬಾಂಧವ್ಯ ನಿಗೂಢವಾಗಿ ಹೇಗೆ ಬಂಧಿಸಿತ್ತು ಎಂಬುದರ ಸುತ್ತ ಹೆಣೆದ ಕಥೆ ಸಾವಿತ್ರಿ. ಒಂದು ಪ್ರೇಮ ಘಟನೆಯನ್ನು ನೀವೇ ಬರೆಯಬೇಕಾಗಿದ್ದ ಕಥೆ ವಿವರಿಸುತ್ತದೆ. ಪರಸ್ಪರರ ಸಂಬಂಧಗಳೂ ಸಾವಿನ ಅನುಭವದ ತೀವ್ರತೆಯಲ್ಲಿ ಹೇಗೆ ಪಾತ್ರವಹಿಸುತ್ತವೆಯೆಂಬುದನ್ನು 'ಅಪಘಾತ' ವರ್ಣಿಸುತ್ತದೆ. ಒಂದು ಹೆಸರಿನ ಕಥೆ

ಸಾವಿನ ಬಗೆಗಿನ ಒಂದು ವ್ಯಾಖ್ಯಾನದಂತಿದೆ. ಒಬ್ಬ ವ್ಯಕ್ತಿಯ ಭೌತಿಕವಾದ ಸಾವು ಸಾವೇ ಅಥವಾ ಅವನ ನೆನಪನ್ನು ನಮ್ಮ ನೆನಪಿನ ಕೋಶದಿಂದ ಕಳೆಯುವುದು ಆ ವ್ಯಕ್ತಿಯ ಸಾವೇ ಎಂಬ ವಿಚಾರವನ್ನು ಕಥೆಗಾರರು ಓದುಗರ ಮುಂದಿಡುತ್ತಾರೆ. ಒಟ್ಟಾಗಿ ಈ ಸಂಕಲನದಲ್ಲಿ ಸಾವಿನ ಬಗೆಗೆ, ಸಾವು ಬದುಕಿನ ಬಗೆಗೆ, ಸಾವಿನಾಚೆಯ ಬಗೆಗೂ ಗಾಢವಾಗಿ ಜಿಜ್ಞಾಸೆಗೈದಿರುವುದು ಕಂಡುಬರುತ್ತದೆ.

## ೬. ಸಿದ್ಧಾರ್ಥ

ದೀರ್ಘವಾದ ಕಥೆಗಳನ್ನೊಳಗೊಂಡ ಈ ಸಂಕಲನವು ೧೯೮೮ರಲ್ಲಿ ಪ್ರಕಟವಾಗಿದೆ. ಹುಡುಕಾಟ, ಸಿದ್ಧಾರ್ಥ, ದಾಸಣ್ಣ, ಜಾನಕಿ ಎಂಬ ನಾಲ್ಕು ಕಥೆಗಳಿದ್ದು, ಅವು ಮುಂಬಯಿಯ ಜೀವನವನ್ನು ಕುರಿತಂತೆ ವಿವರಿಸುತ್ತವೆ. ಮಾನವೀಯ ಸಂಬಂಧಗಳ ಹುಡುಕಾಟ ಇಲ್ಲಿನ ಕಥೆಗಳ ಮುಖ್ಯ ಕಾಳಜಿಯಾಗಿದೆ. ಮುಂಬಯಿನಂತಹ ಯಂತ್ರ ನಗರದೊಂದಿಗಿನ ಲೇಖಕರ ಸಾಂಸ್ಕೃತಿಕ ಸಂಬಂಧಗಳನ್ನು ಇಲ್ಲಿಯ ಕಥೆಗಳು ಹೇಳುತ್ತವೆ.

## ಕಾದಂಬರಿಗಳು :

ಚಿತ್ತಾಲರು ಕಾದಂಬರಿ ಕ್ಷೇತ್ರದಲ್ಲಿಯೂ ಅನುಪಮವಾದ ಕೃಷಿಗೈದಿದ್ದಾರೆ. ಮೂರು ದಾರಿಗಳು, ಶಿಕಾರಿ, ಛೇದ, ಪುರುಷೋತ್ತಮ, ವಿಸರ್ಜನೆ ಎಂಬ ಐದು ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳ ಸ್ಥೂಲವಾದ ಪರಿಚಯವನ್ನು ಈಗ ಮಾಡಿಕೊಳ್ಳಬಹುದು.

## ೧. ಮೂರು ದಾರಿಗಳು

ಚಿತ್ತಾಲರ ಮೊದಲ ಕಾದಂಬರಿ ೧೯೬೪ ರಲ್ಲಿ ಪ್ರಕಟವಾಗಿದೆ. ಹೆಜ್ಜೆ ಮೂಡದ ಹಾದಿಯಲ್ಲಿ, ತಥಾಸ್ತು ಎಂದಿತ್ತು ಪ್ರೀತಿ, ಸಿಡಿಮದ್ದಿನ ವಾಸನೆ ಮತ್ತು ಕಾಲಸರಿದಂತೆ ಎಂಬ ನಾಲ್ಕು ಭಾಗಗಳಲ್ಲಿ ಕಥೆಯನ್ನು ಹೆಣೆಯಲಾಗಿದೆ. ಹನೇಹಳ್ಳಿಯ ಶಾನಭಾಗ ವಿಶ್ವನಾಥರ ಮಗಳಾದ ನಿರ್ಮಲೆ ಕಾರವಾರದ ಸೋದರತ್ತೆ ಮನೆಯಲ್ಲಿದ್ದು ಇಂಗ್ಲಿಷ್ ಶಾಲೆಗೆ ಹೋಗುತ್ತಿರುತ್ತಾಳೆ. ಒಂದು ದಿನ ರಂಗಪ್ಪನ ಸ್ಟುಡಿಯೋದಲ್ಲಿ ಸಂಜೆ ಇವಳೊಬ್ಬಳೇ ಇದ್ದಳೆಂಬ ಸುದ್ದಿಯಿಂದ ಕಥೆ ಪ್ರಾರಂಭವಾಗುತ್ತದೆ. ಆ ಕಥೆ ನಾನಾ ರೀತಿಯಾಗಿ ಬೆಳೆದು ಕೊನೆಗೆ ಸನ್ನಿವೇಶಗಳ ಸುಳಿವಿಗೆ ಸಿಕ್ಕು, ವಿಧಿಯ ಕೈಗೊಂಬೆಯಾಗಿ ನಿರ್ಮಲೆ ದುರಂತಕ್ಕೆ ಬಲಿಯಾಗುತ್ತಾಳೆ. ಕಾದಂಬರಿಯುದ್ದಕ್ಕೂ ನಿರ್ಮಲೆಯ ವಿರುದ್ಧ ವಿಧಿಯ ಕೈವಾಡ ಸ್ಪಷ್ಟವಾಗಿ ಕಂಡುಬರುತ್ತದೆ. ನಿರ್ಮಲೆಯ ಬಾಳಿನಲ್ಲಿ ವಿಧಿ ತಂದೊಡ್ಡುವ ಘಟನೆಗಳು, ವ್ಯಕ್ತಿಗಳು ಎಲ್ಲವೂ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ನಿರ್ಮಲೆಯ ಸಾವಿಗೆ ಕಾರಣವಾಗುತ್ತವೆ. ಈ ಕಾದಂಬರಿಯ ಪರಹು ಇಡೀ ಉತ್ತರ ಕನ್ನಡದ ಮಧ್ಯಮವರ್ಗದವರ ಸಂಸ್ಕೃತಿಯನ್ನು ಚಿತ್ರಿಸುತ್ತದೆ.

ಜೀವನದಲ್ಲಿ ಉದ್ಭವಿಸಿದ ಸಮಸ್ಯೆಯೊಂದಕ್ಕೆ ಮೂರು ಪಾತ್ರಗಳು ಭೀತಿ, ಪ್ರೀತಿ, ಬಂಡಾಯ (ಆತ್ಮನಾಶ) ಗಳೆಂಬ ಮೂರು ದಾರಿಗಳನ್ನು ಈ ಕಾದಂಬರಿ ಕಟ್ಟಿಕೊಡುತ್ತದೆ.

## ೨. ಶಿಕಾರಿ

ಕನ್ನಡದ ಅತ್ಯುತ್ತಮ ಹತ್ತು ಕಾದಂಬರಿಗಳಲ್ಲಿ ಒಂದಾದ 'ಶಿಕಾರಿ', ೧೯೭೯ರಲ್ಲಿ ಪ್ರಕಟಗೊಂಡು ಇಲ್ಲಿಯವರೆಗೆ ಐದು ಮುದ್ರಣಗಳನ್ನು ಕಂಡಿದೆ. ಕೃತಿಯ ನಾಯಕನಾದ ನಾಗಪ್ಪನನ್ನು ಸ್ವಾರ್ಥ, ಸ್ವಹಿತ ರಕ್ಷಣೆಗಳ ಸಲುವಾಗಿ ಬೇಟೆಗಾರರ ತಂಡವೊಂದು ಬೆನ್ನುಹತ್ತಿ, ಆತನ ಅಸ್ತಿತ್ವದ ಬೇರುಗಳನ್ನು ಅಲುಗಾಡಿಸಿ ನಾಶಪಡಿಸಲು ಪ್ರಯತ್ನಿಸುವುದೇ ಇಲ್ಲಿನ ಕಥಾವಸ್ತು. ಈ ಕಾದಂಬರಿಯಲ್ಲಿ ನಡೆಯುವ ಬೇಟೆ ಮನುಷ್ಯನಿಂದ ಪಶುಪಕ್ಷಿಗಳ ಬೇಟೆಯಾಗಿರದೆ ಇಂದಿನ ಔದ್ಯೋಗೀಕೃತ ನಾಗರೀಕತೆಯಲ್ಲಿ ಎಲ್ಲಿಯೂ ನೋಡಸಿಗುವ ಮನುಷ್ಯನಿಂದ ಮನುಷ್ಯನ ಬೇಟೆಯಾಗಿದೆ. ಈ ಕಾದಂಬರಿಯ ವಸ್ತು ಹೊಸದಾಗಿದ್ದು, ಚಿತ್ತಾಲರ ಅದ್ಭುತ ಪ್ರತಿಭೆಗೆ ಸಾಕ್ಷಿಯಂತಿದೆ. ನಾಗಪ್ಪ, ಫಿರೋಜ ಬಂದೂಕವಾಲಾ, ಶ್ರೀನಿವಾಸ, ರೀನಾ-ಮೇರಿ, ಪದ್ಮಕ್ಕ ಇಲ್ಲಿನ ಪ್ರಮುಖ ಪಾತ್ರಗಳು, ನಾಗಪ್ಪನ ಮಾನಸಿಕ ತುಮುಲವನ್ನು ಲೇಖಕರು ಸಮರ್ಪಕವಾಗಿ ಚಿತ್ರಿಸಿದ್ದಾರೆ. ಚಿತ್ತಾಲರನ್ನು ಶ್ರೇಷ್ಠ ಸಾಹಿತಿಗಳ ಸಾಲಿನಲ್ಲಿ ನಿಲ್ಲಿಸಿದ ಶಿಕಾರಿಯು ಓದುಗರನ್ನು, ವಿಮರ್ಶಕರನ್ನು ವಿಶೇಷವಾಗಿ ಆಕರ್ಷಿಸಿದೆ.

## ೩. ಛೇದ

೧೯೮೫ರಲ್ಲಿ ಪ್ರಕಟವಾದ ಈ ಕೃತಿ ಚಿತ್ತಾಲರ ಮೂರನೆಯ ಕಾದಂಬರಿ. ಕೊಲೆಯೊಂದರ ಸುತ್ತ ಕಥೆಯನ್ನು ಹೆಣೆಯಲಾಗಿದೆ. ಎಕ್ಸ್‌ಪ್ರೆಸ್ ಪತ್ರಿಕೆಯ ವರದಿಗಾರನಾದ ಕರುಣಾಕರನ್ ರದ್ದೀವಾಲಾನ ಖೂನಿಯ ಬಗೆಗೆ ಮಾಹಿತಿ ಸಂಗ್ರಹಿಸಲು ಪಾರಸೀ ಗೃಹಸ್ಥ ಬೇಹರಾಮ್‌ನ ಮನೆಗೆ ಬರುವಲ್ಲಿಂದ ಕಥೆ ಪ್ರಾರಂಭವಾಗುತ್ತದೆ. ಮನುಷ್ಯ ಸೃಷ್ಟಿಸಿದ ಸಮಾಜ ಜಾಲದಲ್ಲಿ ಮನುಷ್ಯನೇ ಸಿಕ್ಕುಬಿದ್ದು ತೊಳಲಾಡುವ ದುರಂತ ವಿಪರ್ಯಾಸವನ್ನು ಇಲ್ಲಿ ಕಾಣುತ್ತೇವೆ. ಮುಂಬಯಿ ನಗರದ ವಾಸ್ತವ ಬದುಕನ್ನು ಲೇಖಕರು ಇಲ್ಲಿ ನೈಜವಾಗಿ ಚಿತ್ರಿಸಿದ್ದಾರೆ. ಕರುಣಾಕರನ್, ಬೇಹರಾಮ್, ಶಿರೀನ್, ವಾಸುದೇವನ್, ಅಗರವಾಲ ಇಲ್ಲಿನ ಪ್ರಮುಖ ಪಾತ್ರಗಳು. ಚಿತ್ತಾಲರ ಸೃಜನಶೀಲ ಬದುಕಿನ ಮುಂದುವರೆದ ಘಟ್ಟವನ್ನು ಛೇದ ಕಾದಂಬರಿ ಸಂಕೇತಿಸುತ್ತದೆ.

## ೪. ಪುರುಷೋತ್ತಮ

೧೯೯೦ರಲ್ಲಿ ಪ್ರಕಟವಾದ ಈ ಕೃತಿ ೬೦೦ ಪುಟಗಳನ್ನೊಳಗೊಂಡ ಬೃಹತ್ ಕಾದಂಬರಿ, ಪಿತ್ರಾರ್ಜಿತ ಆಸ್ತಿಯಾದ ಮನೆಯೊಂದನ್ನು ಖರೀದಿಸಲು ಹಾತೊರೆಯುವ ವ್ಯಕ್ತಿಗಳ ಚಿತ್ರಣ, ತನ್ನ ಮನೆಯನ್ನು ಪ್ರೀತಿಸುವ ಮನುಷ್ಯನೊಬ್ಬನು ಹಣವನ್ನು ನಿರಾಕರಿಸುವ ಧೈರ್ಯವನ್ನು, ರಾಜಕೀಯ ಕೈವಾಡವನ್ನು ಈ ಕೃತಿ ಸೊಗಸಾಗಿ ನಿರೂಪಿಸುತ್ತದೆ. ಪುರುಷೋತ್ತಮ, ದಾಯಾದಿ ಮಂಜುನಾಥ, ವೆಂಕಟದಾಸೂನ,

ರಾಮನಾಥಾಣಿ ಇಲ್ಲಿನ ಪ್ರಮುಖ ಪಾತ್ರಗಳು. ಶಿಕಾರಿಯ ನಾಗಪ್ಪನ ಮುಂದುವರಿಕೆಯಂತೆ ಇಲ್ಲಿನ ಪುರುಷೋತ್ತಮ ಕಂಡುಬರುತ್ತಾನೆ.

**೫. ವಿಸರ್ಜನೆ**

೧೯೯೧ರ ಕರ್ಮವೀರ ದೀಪಾವಳಿ ವಿಶೇಷಾಂಕಕ್ಕೆ ಉಚಿತ ಕೊಡುಗೆಯಾದ ಇದು ಕಿರುಕಾದಂಬರಿ. ಸ್ಮಗ್ಲರ್, ಲಂಪಟನಾದ ಸಾಂತಪ್ಪ ಶ್ರೀಮಂತನಾಗಿ ಮನಸ್ಸಿಗೆ ನೆಮ್ಮದಿಯಿಲ್ಲದೆ ತೊಳಲಾಡಿ ಸಾವನ್ನು ತಂದುಕೊಂಡ ಚಿತ್ರಣವನ್ನು ಇಲ್ಲಿ ಕಾಣುತ್ತೇವೆ. ಸಾಂತಪ್ಪ, ರಾಮಕೃಷ್ಣ, ವಾಸುದೇವ, ವನೀತಾ, ಶಾಂತಾ ಇಲ್ಲಿನ ಪ್ರಮುಖ ಪಾತ್ರಗಳು.

**ಪ್ರಬಂಧ ಸಂಕಲನ**

೧೯೮೧ರಲ್ಲಿ ಪ್ರಕಟವಾದ 'ಸಾಹಿತ್ಯ ಸೃಜನಶೀಲತೆ ಮತ್ತು ನಾನು', ಹದಿಮೂರು ಪ್ರಬಂಧಗಳ ಸಂಕಲನ. ಇದು ಹನೇಹಳ್ಳಿ, ದೇವರು ಮತ್ತು ನಾನು. ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ ಎಂಬ ಎರಡು ಭಾಗಗಳನ್ನೊಳಗೊಂಡಿದ್ದು, ಸೃಜನಶೀಲ ಲೇಖಕರಾದ ಚಿತ್ತಾಲರು ತಮ್ಮ ಸಾಹಿತ್ಯ ಹಾಗೂ ಬದುಕಿನ ಅನುಭವಗಳನ್ನು ದಾಖಲಿಸಿದ್ದಾರೆ. ಸಾಹಿತ್ಯವನ್ನು ಕುರಿತಾದ ಕೆಲವು ತಾತ್ವಿಕ ಅಂಶಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಚಿತ್ತಾಲರ ಸಾಹಿತ್ಯದೃಷ್ಟಿ, ಸೃಜನ ಪ್ರಕ್ರಿಯೆ, ಸಾಮಾಜಿಕ ಧೋರಣೆ, ವಿಮರ್ಶೆಯ ನಿಲುವು, ನಂಬಿಕೆಗಳು ಮುಂತಾದವುಗಳು ಅಭಿವ್ಯಕ್ತಗೊಂಡಿವೆ..

ಹೀಗೆ ಯಶವಂತ ಚಿತ್ತಾಲರು ಕಥೆ, ಕಾದಂಬರಿ, ಪ್ರಬಂಧ ಸಾಹಿತ್ಯಕ್ಕೆ ಗಮನಾರ್ಹವಾದ ಕೊಡುಗೆಯನ್ನು ನೀಡಿದ್ದಾರೆ.

# ಕೃತಿಗಳ ವಿಮರ್ಶೆ

ಯಶವಂತ ಚಿತ್ತಾಲರ ಕೃತಿಗಳು ವಿಮರ್ಶಾ ಕ್ಷೇತ್ರದಲ್ಲಿ ಚರ್ಚೆಗೆ, ಸಂವಾದಕ್ಕೆ, ವಿಶ್ಲೇಷಣೆಗೆ ಒಳಪಟ್ಟಿವೆ. ಕೃತಿಯ ವಸ್ತು, ವಿಷಯವೈವಿಧ್ಯ, ಪಾತ್ರರಚನೆ, ತಂತ್ರ, ಶೈಲಿ, ಕಲಾತ್ಮಕತೆ ಇತ್ಯಾದಿ ವಿಷಯಗಳ ಬಗೆಗೆ ಹಲವಾರು ವಿಮರ್ಶಕರು ಪ್ರತಿಕ್ರಿಯಿಸಿದ್ದಾರೆ. ''ಒಂದು ಉದಾರವಾದ ಸೃಜನಶೀಲ ಮನಸ್ಸು ವ್ಯಾಪಿಸಿಕೊಳ್ಳುವ ಬಗೆ ಯಶವಂತ ಚಿತ್ತಾಲರ ಸಾಹಿತ್ಯ. ಅವರು ಬದುಕನ್ನು ಕುತೂಹಲದ ಕಣ್ಣುಗಳಿಂದ ನೋಡುವಂತೆಯೇ, ಬೇರೆ ಬೇರೆ ವಿಚಾರಧಾರೆಗಳಿಗೆ, ಶಾಸ್ತ್ರವಿಷಯಗಳಿಗೆ ಮನಸ್ಸನ್ನು ತೆರೆದಿದ್ದಾರೆ. ಇದರಿಂದ ಅವರ ಸೃಷ್ಟಿಗೆ ಬಲ ಬಂದಿದೆ. ಇಂದಿನ ಲೇಖಕರಲ್ಲಿ ಅಷ್ಟಾಗಿ ಕಾಣದ ಸಂಯಮವನ್ನು ನಾವು ಚಿತ್ತಾಲರಲ್ಲಿ ಕಾಣಬಹುದು. ಇದರಿಂದಲೂ ಅವರ ಸಾಹಿತ್ಯಕ್ಕೆ ಶಕ್ತಿ ಬಂದಿದೆ'' ಎಂದು ಡಾ. ಹಾ.ಮಾ. ನಾಯಕ ಅವರು ಅಭಿಪ್ರಾಯ ಪಟ್ಟಿದ್ದಾರೆ. ಕನ್ನಡ ನಾಟಕಕಾರ ಶ್ರೀರಂಗರು ''ದಕ್ಷಿಣ ಕನ್ನಡದ ಜೀವನವನ್ನು ಚಿತ್ರಿಸಿದ ಶ್ರೀ ಶಿವರಾಮ ಕಾರಂತರ ಸ್ಥಾನಕ್ಕೆ ಉತ್ತರ ಕನ್ನಡದ ಜೀವನವನ್ನು ಚಿತ್ರಿಸಿದ ಶ್ರೀ ಚಿತ್ತಾಲರು ಪ್ರತಿಸ್ಪರ್ಧಿಗಳಾಗಬಲ್ಲರು'' ಎಂದು ಹೇಳಿರುವುದು ಸಮಂಜಸವಾದುದಾಗಿದೆ.

೧೯೮೦ಕ್ಕಿಂತ ಪೂರ್ವದಲ್ಲಿ ಬಂದ ಪ್ರಮುಖ ವಿಮರ್ಶಾ ಲೇಖನಗಳನ್ನು ಜಿ.ಎಸ್.ಭಟ್ ಅವರು 'ಯಶವಂತ ಚಿತ್ತಾಲ : ಕೆಲವು ಅಧ್ಯಯನಗಳು' ಎಂಬ ಗ್ರಂಥದ ಮೂಲಕ ಸಂಪಾದಿಸಿ ಪ್ರಕಟಿಸಿದ್ದಾರೆ. ಸಂದರ್ಶನ, ಆಬೋಲಿನ, ಆಟ, ಕತೆಯಾದಳು ಹುಡುಗಿ, ಮೂರು ದಾರಿಗಳು, ಶಿಕಾರಿ ಕೃತಿಗಳ ಬಗೆಗೆ ಬಂದ ಹಲವು ವೈವಿಧ್ಯಮಯವಾದ ಲೇಖನಗಳು ಇಲ್ಲಿ ಸಂಗ್ರಹಗೊಂಡಿವೆ. 'ಶಿಕಾರಿ' ಕಾದಂಬರಿಯ ಬಗೆಗೆ 'ಅನ್ವೇಷಣೆ' (ಅಕ್ಟೋಬರ್ ೧೯೭೯) ವಿಶೇಷಾಂಕ ಪತ್ರಿಕೆಯಲ್ಲಿ ಅಧ್ಯಯನ ನಡೆಸಲಾಗಿದೆ. ಪ್ರಸ್ತುತ ಕೃತಿಯ ಒಳನೋಟಗಳನ್ನು ಇಲ್ಲಿ ಗುರುತಿಸುವ ಪ್ರಯತ್ನಮಾಡಲಾಗಿದೆ. ೧೯೮೮ರಲ್ಲಿ ಚಿತ್ತಾಲರ ಕಥೆಗಳನ್ನು ಕುರಿತು ವಿಮರ್ಶಾತ್ಮಕವಾಗಿ ಪರಿಚಯಿಸಿರುವ ಕೃತಿಯೊಂದನ್ನು ಕಾಸರಗೋಡಿನ ಕರಾವಳಿ ಪ್ರಕಾಶನವು ಪ್ರಕಟಿಸಿದೆ. ಕತೆಯಾದಳು ಹುಡುಗಿ, ಬೇನ್ಯಾ, ಸಮಗ್ರ ಕಥೆಗಳು ಈ ಸಂಕಲನಗಳ ಸ್ಥೂಲ ಪರಿಚಯ ಇಲ್ಲಿದೆ. ಅಲ್ಲದೇ ನಾಡಿನ ವಿವಿಧ ನಿಯತಕಾಲಿಕೆ, ಗ್ರಂಥಗಳಲ್ಲಿ ಇವರ ಸಾಹಿತ್ಯದ ಬಗೆಗೆ ಲೇಖನಗಳು ಬಂದಿವೆ, ಬರುತ್ತಲಿವೆ. ಅವೆಲ್ಲವುಗಳನ್ನು ಬಳಸಿಕೊಂಡು ಚಿತ್ತಾಲರ ಒಟ್ಟು ಕೃತಿಗಳ ಮೇಲೆ ಬಂದ ವಿದ್ವಾಂಸರ ಪ್ರಮುಖ ಹೇಳಿಕೆಗಳನ್ನು ಈಗ ಸಂಗ್ರಹಿಸಬಹುದು.

ಚಿತ್ತಾಲರ ಬರವಣಿಗೆಯ ಹಿಂದಿರುವ ಕೆಲವು ಪ್ರಮುಖ ಸಂಗತಿಗಳನ್ನು ಡಾ. ಎಚ್.ಎಸ್. ರಾಘವೇಂದ್ರರಾವ್ ಅವರು ಹೀಗೆ ಗುರುತಿಸಿದ್ದಾರೆ.

''ಅವರ ಬರವಣಿಗೆಯಲ್ಲಿ ಹನೇಹಳ್ಳಿಗೆ ವಿಶೇಷ ಮಹತ್ವವಿದೆ. ಅವರ ನೆನ್ನೆ ಇಂದುಗಳ ಭೌತಿಕ ವಿವರಗಳು, ಅಲ್ಲಿ ಇದ್ದ ವ್ಯಕ್ತಿಗಳು, ಅಲ್ಲಿನ ಹಲವು ಕುಟುಂಬಗಳು ಮುಂಬಯಿಯೊಂದಿಗೆ ಪಡೆದುಕೊಂಡ ಸಂಬಂಧಗಳು ಹೀಗೆ ಹಲವು ರೀತಿಯಲ್ಲಿ ಲೇಖಕರು ಅದನ್ನು ಕಟ್ಟಿಕೊಡುತ್ತಾರೆ. ಆದರೆ ಹನೇಹಳ್ಳಿ ಕೇವಲ ಅವರ ಕೃತಿಗಳಿಗೆ ಪ್ರಾದೇಶಿಕತೆಯ ಸ್ಪರ್ಶಕೊಡಲೆಂದು ಒಡಮೂಡುವುದಿಲ್ಲ.''

''ತಾನು ವಿಜ್ಞಾನದ ವಿದ್ಯಾರ್ಥಿಯೇ ವಿನಃ ಸಾಹಿತ್ಯವನ್ನು ಅಭ್ಯಾಸ ಮಾಡಿದವರಲ್ಲವೆಂಬ ಮಾತಿಗೆ ಚಿತ್ತಾಲರು ವಿಶೇಷವಾದ ಒತ್ತು ಕೊಡುತ್ತಾರೆ. ಹೀಗೆಂದಾಗ ವಿಜ್ಞಾನವೊಂದೇ ಸತ್ಯವೆಂಬ ಭ್ರಮೆಯ ಬದಲು, ಸಾಹಿತ್ಯವನ್ನು ಕುರಿತಾದ ಇದುವರೆಗಿನ ನಿಲುವುಗಳಿಗೆ ಹೊಸದೊಂದು ಆಯಾಮವನ್ನು ಸೇರಿಸಬಹುದೆಂದು ಅವರು ತಿಳಿಯುತ್ತಾರೆ. ಅವರ ಸೃಜನಶೀಲ ಕೃತಿಗಳ ಮೇಲೆ ಇಂಥದೊಂದು ಅಧ್ಯಯನದ ನೇರ ಪರಿಣಾಮ ಏನಾಗಿದೆಯೆಂದು ಹೇಳುವುದು ಕಷ್ಟ. ಅಂಥ ಪ್ರಭಾವವನ್ನು ಅವರು ನಿರಾಕರಿಸುತ್ತಾರೆ ಕೂಡ.''

''ತಮ್ಮ ಬದುಕಿನ ಮಹತ್ವದ ಭಾಗವನ್ನು ಮುಂಬಯಿ ಮಹಾನಗರದ ಮುಖಹೀನ ನಾಗರಿಕತೆಯ ವಿಷಮತೆಗಳ ನಡುವೆ ಕಳೆದಿರುವುದು ಚಿತ್ತಾಲರ ಬರವಣಿಗೆಯ ಕೆಲವು ಚಹರೆಪಟ್ಟಿಗಳನ್ನು ತೀರ್ಮಾನಿಸಿದೆ...... ಸಕಲ ಸಂಬಂಧಗಳ ಕೇಂದ್ರವೂ ಹಣವೇ ಆಗಿರುವಂಥ ಜೀವನಕ್ರಮವನ್ನು ತೀರ ಹತ್ತಿರದಿಂದ ಕಂಡುಂಡು, ಅದರ ಬಗ್ಗೆ ತಳೆದ ತೀವ್ರ ವಿಷಾದ ಹಾಗೂ ದ್ವೇಷದ ಫಲವಾಗಿ ಅವರ ಈ ದಶಕದ ಬರವಣಿಗೆ ಮೂಡಿ ಬಂದಿದೆ. ಆದರೆ ಆ ಮರುಳುಗ್ಗಾಡಿನ ನಡುವೆಯೂ ವ್ಯಕ್ತಿಯ ಹಂತದಲ್ಲಿ ಪ್ರೀತಿಯ ಸಾರ್ಥಕತೆಯ ಹೂಗಳು ಅರಳಬಹುದೆಂಬ ಅದಮ್ಯ ಆಶಾವಾದ ಪ್ರಕಟವಾಗಿದೆ.''

''ದ್ರಾವಿಡ ಭಾಷೆಯಲ್ಲದ ಕೊಂಕಣಿ ಚಿತ್ತಾಲರ ಮಾತೃಭಾಷೆಯಾಗಿರುವುದರಿಂದ ಪದಕೋಶ ಮತ್ತು ವಾಕ್ಯರಚನೆಯ ಹಂತದಲ್ಲಿ ಅನೇಕ ಹೊಸ ಅಂಶಗಳನ್ನು ಕನ್ನಡದ ತೆಕ್ಕೆಗೆ ತರುವ ಕೆಲಸದಲ್ಲಿ ಚಿತ್ತಾಲರು ಯಶಸ್ವಿಯಾಗುತ್ತಾರೆ. ಇವರ ಗದ್ಯಶೈಲಿಯನ್ನು ಎಚ್ಚರಿಕೆಯಿಂದ ಅಭ್ಯಾಸ ಮಾಡಿದಾಗ ಇಂಥ ಹಲವು ಸಂಗತಿಗಳು ಸ್ಪಷ್ಟವಾಗುವ ಸಾಧ್ಯತೆಯಿದೆ.''

ಅವರ ಎಲ್ಲ ಕೃತಿಗಳನ್ನು ಅಧ್ಯಯನ ಮಾಡಿದಾಗ ಮೇಲಿನ ಅಂಶಗಳು ಸ್ಪಷ್ಟವಾಗಿ ಕಂಡುಬರುತ್ತವೆ.

**ಕಥಾ ಸಾಹಿತ್ಯ**

ಚಿತ್ತಾಲರ ಕಥಾ ಸಾಹಿತ್ಯವನ್ನು ಕುರಿತು ನಾಡಿನ ಹಲವಾರು ವಿದ್ವಾಂಸರು, ವಿಮರ್ಶಕರು ಚರ್ಚಿಸಿದ್ದಾರೆ. ಜಿ.ಎಸ್. ಆಮೂರ, ಶಾಂತಿನಾಥ ದೇಸಾಯಿ, ಗೌರೀಶ ಕಾಯ್ಕಿಣಿ, ಎಲ್.ಎಸ್. ಶೇಷಗಿರಿರಾವ್, ಯು.ಆರ್. ಅನಂತಮೂರ್ತಿ, ಜಿ.ಎಚ್.

ನಾಯಕ, ಬಸವರಾಜ ಕಲ್ಗುಡಿ, ಎಸ್. ದಿವಾಕರ್ ಮುಂತಾದವರು ಪ್ರಮುಖರಾಗಿದ್ದಾರೆ. ಕರೀಗೌಡ ಬೀಚನಹಳ್ಳಿಯವರು ಚಿತ್ತಾಲರ ಒಟ್ಟು ಕಥಾಸಾಹಿತ್ಯವನ್ನು ಅಧ್ಯಯನದ ದೃಷ್ಟಿಯಿಂದ ಐವತ್ತರ, ಅರವತ್ತರ, ಎಪ್ಪತ್ತರ ದಶಕಗಳ ಘಟ್ಟದ ಕಥೆಗಳೆಂದು ವಿಭಾಗಿಸುತ್ತಾರೆ. ಐವತ್ತರ ಘಟ್ಟದಲ್ಲಿ ಸಂದರ್ಶನ, ಆಬೋಲಿನ, ಅರವತ್ತರ ಘಟ್ಟದಲ್ಲಿ ಆಟ, ಎಪ್ಪತ್ತರ ದಶಕದಲ್ಲಿ ಕತೆಯಾದಳು ಹುಡುಗಿ ಸಂಕಲನಗಳು ಸೇರುತ್ತವೆ. ಆಮೂರ ಅವರು ಚಿತ್ತಾಲರ ಕಥೆಗಳನ್ನು ಮೂರು ರೀತಿಯಲ್ಲಿ ವಿಂಗಡಿಸುತ್ತಾರೆ. ಅವುಗಳಾವುವುವೆಂದರೆ:

ಹನೇಹಳ್ಳಿಯ ಪ್ರಾದೇಶಿಕ ಹಿನ್ನೆಲೆಯುಳ್ಳ ಸಾಂಪ್ರದಾಯಿಕ ಪ್ರಜ್ಞೆಯ ಆವಿಷ್ಕಾರಗಳಾದ ಕತೆಗಳು. ಈ ಕತೆಗಳು ಹಾಸ್ಯ, ವ್ಯಂಗ್ಯ, ದುರಂತ ಹೀಗೆ ಅನೇಕ ಮುಖಗಳನ್ನು ಹೊಂದಿವೆಯಾದರೂ ಮುಖ್ಯತಃ ಅವು ಸಾಂಪ್ರಾದಾಯಿಕ ಸಂವೇದನೆ, ಮೌಲ್ಯಗಳು ಸಾವಯವ ಸಮಾಜದ ಪರಿಧಿಯಲ್ಲಿಯೇ ಕೆಲಸ ಮಾಡುತ್ತವೆ. ಈ ಸಮಾಜದ ವ್ಯವಸ್ಥೆಯನ್ನಾಗಲಿ, ಅದು ಒಪ್ಪಿಕೊಂಡ ಮೌಲ್ಯಗಳನ್ನಾಗಲಿ, ಪರೀಕ್ಷೆಗೆ ಒಳಪಡಿಸುವ ಉದ್ದೇಶ, ಜರೂರು ಈ ಕಥೆಗಳಿಗಿಲ್ಲ. ಅವುಗಳ ದೃಷ್ಟಿ ಇತಿಹಾಸದ ಮೇಲಿದೆಯೇ ಹೊರತು ಸಮಕಾಲೀನತೆಯ ಮೇಲಲ್ಲ.

ನಗರ ಜೀವನದ ಹಿನ್ನೆಲೆಯಲ್ಲಿ ಬರೆದ, ನವ್ಯ ಪ್ರಜ್ಞೆಯ ಅಭಿವ್ಯಕ್ತಿಯನ್ನು ಸಾಧಿಸಲೆತ್ನಿಸುವ ಕಥೆಗಳು. ಕಥೆ ಮುಖ್ಯವಲ್ಲ, ಅನುಭವದ ಸಂಕೀರ್ಣತೆಯನ್ನು, ತೀವ್ರತೆಯನ್ನು ಭಾಷೆಯಲ್ಲಿ ಹಿಡಿಯುವುದು ಮುಖ್ಯ. ಇಂಥ ಕಥೆಗಳಲ್ಲಿ ಮೂರ್ತಗೊಳ್ಳುವ ಅನುಭವ ಪ್ರತ್ಯೇಕತೆ, ಅಸ್ವಸ್ಥತೆ, ಏಕಾಕಿತನ, ಭೀತಿ ಇಂಥ ಮಾನಸಿಕ ಅವಸ್ಥೆಗಳಿಗೆ ಸಂಬಂಧಪಟ್ಟಿದ್ದು. ಮೊದಲನೆಯ ಗುಂಪಿನ ಕಥೆಗಳಲ್ಲಿ ಸಾಮಾನ್ಯವಾಗಿ ಕಂಡು ಬರದ ಅಂತರ್‌ಮುಖತೆ, ಉತ್ಕಟತೆ ಇಲ್ಲಿ ಎದ್ದು ಕಾಣುವ ಗುಣಗಳಾಗಿವೆ. ಇವು ನವ್ಯಪ್ರಜ್ಞೆಯ ಕಥೆಗಳಾದರೂ ನವ್ಯಮೌಲ್ಯಗಳನ್ನು ಉದ್ದೇಶಪೂರ್ಣವಾಗಿ ಎತ್ತಿ ಹಿಡಿಯುವ ಪ್ರಯತ್ನ ಇಲ್ಲಿ ನಡೆಯುವುದಿಲ್ಲವೆನ್ನುವುದು ಗಮನಿಸಬೇಕಾದ ಅಂಶ.

ವಿಶಿಷ್ಟ ಸಾಕಾರ ಅನುಭವದ ಮೇಲೆ ನಿಂತಿದ್ದು ಸಾರ್ವತ್ರಿಕತೆಯತ್ತ ಮುಖ ತಿರುಗಿಸಿದ ಕಥೆಗಳು. ಮೂಲಭೂತ ಪ್ರತೀಕಗಳ ಮತ್ತು Myth ಗಳ ಮುಖಾಂತರ ಕಾಮ, ಮೃತ್ಯು ಮುಂತಾದ ಸಾರ್ವತ್ರಿಕ ಸತ್ಯಗಳನ್ನು ಸಾಕ್ಷಾತ್ಕರಿಸುವುದು ಇಲ್ಲಿ ನಡೆಯುವ ಸೃಷ್ಟಿಕ್ರಿಯೆ. ಈ ಕಥೆಗಳ ಹಿನ್ನೆಲೆ ಪ್ರಾದೇಶಿಕವಿರಬಹುದು ಅಥವಾ ಸತ್ಯ ಜಗತ್ತಿನ ಆಭಾಸವನ್ನುಂಟುಮಾಡಬಲ್ಲ ಕಾಲ್ಪನಿಕ ಜಗತ್ತಿರಬಹುದು. ಇದು ಮುಖ್ಯವಲ್ಲ. ಕ್ರಿಯೆ ಏಕಕಾಲಕ್ಕೆ ಅನೇಕ ಸ್ಥರಗಳಲ್ಲಿ ನಡೆಯುವಂತಾಗುವುದು ಮುಖ್ಯ. ಈ ಕಥೆಗಳು ಕಂಡು ಅನುಭವಿಸಿದ ಆಳವಾದ ಸತ್ಯಗಳನ್ನೊಳಗೊಂಡಿರುವುದರಿಂದ ಅವು ಅವರ ಒಟ್ಟು ಜೀವನ ದರ್ಶನದ ಅವಿಭಾಜ್ಯ ಮಹತ್ವವನ್ನು ಪಡೆಯುತ್ತವೆ.

ಸಂದರ್ಶನ ಕಥಾಸಂಕಲನಕ್ಕೆ ಮುನ್ನುಡಿ ಬರೆಯುತ್ತಾ ಗೌರೀಶ ಕಾಯ್ಕಿಣಿಯವರು ಇಲ್ಲಿನ ಕಥೆಗಳಲ್ಲಿ ಕಂಡುಬರುವ ಕಲಾತ್ಮಕತೆ, ಮನೋವೈಜ್ಞಾನಿಕತೆ, ಶೈಲಿ, ಭಾಷೆಯನ್ನು

ಎತ್ತಿ ಹೇಳಿದ್ದಾರೆ. ಈ ಸಂಕಲನದಲ್ಲಿ ಒಂಬತ್ತು ಕಥೆಗಳಿವೆ. ಅವೆಲ್ಲವೂ ಬರೆದ ಕಾಲಾನುಕ್ರಮದಲ್ಲಿಯೇ ಇಲ್ಲಿ ಬಂದಿಲ್ಲ. ಅವುಗಳ ಪೋಣಿಕೆಯಲ್ಲಿ ಒಂದು ಹವಣಿಕೆ ಕಂಡು ಬರುತ್ತದೆ. ಮೊದಲಿನವು ಐದು ಪ್ರಾದೇಶಿಕ ಜೀವನ ಚಿತ್ರಗಳು. 'ತಪ್ಪಿದ ಗುರಿ'ಗೆ ಪ್ರಾದೇಶಿಕ ಸ್ಪರ್ಶವಿದ್ದರೂ ಸಂದರ್ಭವಿಲ್ಲ. ವರ್ಗೀಯ ವಾಗ್ಧೋರಣೆ ಇದ್ದರೂ ಅದರ ಜೀವಾಳದ ಸ್ವಾರಸ್ಯವೂ ಸ್ವಾರಸ್ಯದ ಜೀವಾಳವೂ ತಪ್ಪಿದಗುರಿಯೆಂಬ ತಪ್ಪು ತಿಳುವಳಿಕೆಯೇ. ಮುಂದಿನವೆಲ್ಲ ಮೂಲತಃ ಮತ್ತು ಮುಖ್ಯತಃ ಮನೋವೈಜ್ಞಾನಿಕ ಮೋಡಿಯಾಗಿವೆ. ಈ ಕಥೆಗಾರರಿಗೆ ಅತ್ಯಂತ ಭೂಷಣವಾದ ಸಂಗತಿಯೇ ಈ ಮೋಡಿ ಮನೋಧರ್ಮದ ಮರ್ಮ- ಮರ್ಮಗಳನ್ನು ಜಿನುಗಾಗಿ ಕುಸುರಾಗಿ ಸಾರವತ್ತಾಗಿ ರೇಖಿಸುವ ಕುಶಲಸಿದ್ಧಿ...... ನಿಜವಾದ, ಖಚಿತವಾದ, ಮಿಕ್ಕವರಿಗೆ ಮೇಲ್ಪಂಕ್ತಿಯೂ ಆಗಬಲ್ಲ ಸೂಕ್ಷ್ಮವೂ ಆಳವೂ ನೇರವೂ ಆದ ಮನೋವೈಜ್ಞಾನಿಕತೆಯ ಒಳನೋಟವನ್ನು ತಿಳಿಯಾಗಿ, ಲಲಿತವಾಗಿ ತಮ್ಮ ಪಾತ್ರ, ಪ್ರಸಂಗ, ನಿರೂಪಣೆಯ ಎಲ್ಲ ಮಗ್ಗಲುಗಳಲ್ಲಿ ಸೊಗಸಿನ ಓದಿಗೆ ಜಡವಾಗದೆ ಜಂಜಡವಾಗದೆ ವ್ಯಕ್ತಪಡಿಸಿರುತ್ತವೆ.

ಉತ್ತುಮಿ, ಮುಕುಂದನ ದಾಕ್ಷಿಣ್ಯ, ಫೀಜೀ ಮತ್ತು ಸಂದರ್ಶನ ಈ ಕಥೆಗಳಲ್ಲಿ ವಸ್ತುವಿನ ಆಯ್ಕೆ, ಪಾತ್ರಗಳ ಪಡಿಯಚ್ಚು ಸನ್ನಿವೇಶಗಳ ಸಂವಿಧಾನ ಇವೆಲ್ಲ ಮಟ್ಟಗಳಲ್ಲಿ ಮೂಡಿದ ಮನೋವೈಜ್ಞಾನಿಕತೆ ಸುಕುಮಾರವಿದ್ದಷ್ಟೇ ಕಲಾಜಾಗ್ರತವಾಗಿವೆ. ಕಥೆಗೊಂದು ಹೊಸಮುಖ, ಕಥನಕ್ಕೆ ಒಂದು ಹೊಸ ಮೈ, ಪ್ರತಿ ಪ್ರಯೋಗದಲ್ಲಿಯೂ ಪ್ರಕಟವಾಗಿವೆ. ಒಂದು ಅವಿಸ್ಮರಣೀಯ ಬಾಲಿಶ ಅನುಭವದ ರೀತಿಯಾಗಿ ಬಂದ ಉತ್ತುಮಿ, 'ನಮ್ಮ ಊರ ರಸಿಕರು' ಮಾದರಿಯ ವ್ಯಕ್ತಿ ಚಿತ್ರದಂತೆ ಬರೆದ ಕಳ್ಳ ಗಿರಿಯಣ್ಣ. ಕೇವಲ ಸಂಭಾಷಣೆಗಳಲ್ಲಿಯೇ ರೂಪುಗೊಂಡು ನಾಟಕೀಯವೆನಿಸುವ 'ಬೊಮ್ಮಿಯ ಹುಲ್ಲು ಹೊರೆ' ಮತ್ತು 'ತಪ್ಪಿದ ಗುರಿ,' ಹರಟೆಯ ಹಾಸಿನಲ್ಲಿ ಸೊಂಪಾಗಿ ನೇಯ್ದು ನಿಂತ ' ಗುಂಡಾಭಟ್ಟರ ಮಡಿ'ಯ ಆಖ್ಯಾಯಿಕೆ, ಏ. ಡಿ. ಗಾರ್ಡಿನರರ ಉಪಹಾಸಗರ್ಭ ನಿಬಂಧ, ಶೈಲಿಯ ನೆನಪು ಮಾಡಿಕೊಡುವ 'ಒಂದು ತತ್ವದ ಸಲುವಾಗಿ' ಎಂಬ ಪ್ರಾಸಂಗಿಕ ಕಥೆ, ಮುಂಜಾವಿನ ಮೂರು ತಾಸುಗಳನ್ನು ಮಾವನ ಮನೆಗೆ ಬಂದ ದಾಕ್ಷಿಣ್ಯ ಪ್ರಕೃತಿಯ ಮಿತಭಾಷಿ ಅಳಿಯನು ಹೇಗೆ ಪೇಚಿಗೆ ಬಿದ್ದು ಕಳೆದನೆಂಬ ವಿಲಂಬಿತವೇಗದ ಕಥನವಾದ 'ಮುಕುಂದನ ದಾಕ್ಷಿಣ್ಯ', Flash back ತಂತ್ರದಲ್ಲಿಯೇ ನಿರೂಪಿಸಿಯೂ ಒಬ್ಬ ಅಂತರ್ಮುಖಿ ವಿಶಿಷ್ಟ ಮನೋಗಂಡದ ವ್ಯಕ್ತಿಯ ಅಂತರಂಗದ ಛಾಯಾಪಟವನ್ನು ಅತ್ಯುತ್ತಮವಾಗಿ ಚಿತ್ರಿಸಿದ 'ಫೀಜೀ' ಮತ್ತು ಸಂಜ್ಞಾಪ್ರವಾಹ ಪದ್ಧತಿಯನ್ನು ಬಹುಮಟ್ಟಿಗೆ ಅನುಸರಿಸಿ ಹೊಸಗನ್ನಡ ಲಘು ಕಥಾ ಲೇಖನದಲ್ಲಿಯೇ ಹೊಸ ಹೆಜ್ಜೆಯೊಂದನ್ನು ಗೆಲುವಿನಿಂದ ಇಟ್ಟ 'ಸಂದರ್ಶನ', ಹೀಗೆ ಯಶವಂತ ಚಿತ್ತಾಲರ ವಾಙ್ಮಯ ಪ್ರತಿಭೆಯ 'ನವನವೋನ್ಮೇಷ'ವು ಈಚಿನ ಹೊಸ ಕಥೆಗಳು ಪ್ರಪಂಚಕ್ಕೆ ಒಂದು ಸೀಮಾಸ್ತಂಭವಾಗಿ ನಿಲ್ಲುವುದೆಂದರೆ ಯಾವ ಅತಿಶಯೋಕ್ತಿಯೂ ಅಲ್ಲ.

''ಮನೋವೈಜ್ಞಾನಿಕ ಅನುಭವಗಳ ನಿವೇದನೆಯಿಂದ ಮೊದಲ್ಗೊಂಡ ಈ ಸಂಕಲನ ಮನೋವೈಜ್ಞಾನಿಕ ತಂತ್ರದ ಕಥೆಯೊಂದರೊಡನೆಯೇ ಮುಕ್ತಾಯ ಹೊಂದುತ್ತದೆ. ಕಥೆಗಳ ಪ್ರತ್ಯೇಕ ಉತ್ತಮತೆ Particular Excellence. ಅವುಗಳ ರಚನೆಯ ಏಕಸೂತ್ರತೆಯಲ್ಲಿ (unity of structure), ವೃತ್ತಿವೈವಿಧ್ಯದಲ್ಲಿ (Variety of mode), ಪ್ರಾದೇಶಿಕ ಹಿನ್ನೆಲೆಯ ಪರಿಪುಷ್ಟ ಗ್ರಾಮೀಣತೆ (Rustic robustness)ಯಲ್ಲಿ, ಮನೋವೈಜ್ಞಾನಿಕವಾದಾಗ ಅನುಭವದ ಒಳಪದರುಗಳನ್ನು ಹಿಂಜಿ ಅನಪೇಕ್ಷಿತ ಅಂತರ್ವಿರೋಧಗಳನ್ನು (unexpected inner contridictions and conflicts) ಬೆಳಕಿಗೆ ತರುವಲ್ಲಿ, ಕೃತಕ ಕರುಣಾ ರಸ ಹರಿಸದೆ, ನೈತಿಕ ಅಭಿನಿವೇಶಕ್ಕೆ ಇಂಬುಗೊಡದೆ, ಬಣ್ಣ ಬೇಗಡೆ ಇಲ್ಲದೆ ನಮ್ಮನ್ನು ಒಳಹೊರಗೆ ಇದ್ದಂತೆ ಕನ್ನಡಿಸುವ ನಿಚ್ಚಳ ಶೈಲಿಯಲ್ಲಿ ಮತ್ತು ಅದು ಬಿಂಬಿಸಿದ ಒಪ್ಪಲೇಬೇಕಾದ ಸತ್ಯ (competing truth)ದಲ್ಲಿ, ಅಲ್ಲದೆ ಕಥೆಗಾರನ ಕಲಾಸೂಕ್ಷ್ಮ ತುಂಬ ದಕ್ಷತೆಯಿಂದ ಕೈನಡೆಯಿಸಿದೆ. ಆದರೂ ಒಂದು ಕಡೆಗೆ ಈ ದಕ್ಷತೆ ತೂಕಡಿಸಿದಂತಿದೆ. ಮುಕುಂದನ ದಾಕ್ಷಿಣ್ಯದ ಕಥೆಯ ಹಿನ್ನೆಲೆ ಕಾರವಾರವೆಂಬಂತೆ ಹೇಳಲಾಗಿದೆ. ಆದರೆ ಅಲ್ಲಿ ಬರುವ 'ಈರನ' ಸಲೂನು ಚಿತ್ತಾಲರ ಹುಟ್ಟಿದೂರನ್ನೆ ನೆನಪಿಸುವಂತಿದೆ. ಆದರೂ ಈ ಸಲೂನಿನ ಈರ, ಹಳ್ಳಿಯ ಹಳೆಯ ಹೆಡ್‌ಮಾಸ್ತರ ಮೋನಪ್ಪ ನಾಯಕ, ಮುಕುಂದನ ಮಾವ, ಮಾಧವನ ಅಣ್ಣ, ಅನಂತನ ಗೆಳೆಯ ಪ್ರತಿವ್ಯಕ್ತಿಯೂ ಸ್ಫುಟವಾಗಿದೆ, ದಿಟವಾಗಿದೆ ''.

''ಈ ಕಥೆಗಾರನ ಕೈಗೆ ಭಾಷೆ ಒಂದು ಪಳಗಿದ ಉಪಕರಣವಾಗಿದೆ. ಬರೇ ಮಾತಿನ ಮಾಟಕ್ಕಾಗಿ ಭಾಷೆಯ ಚಿನ್ನಾಟ ಇಲ್ಲಿ ಎಲ್ಲಿಯೂ ಆದದ್ದಿಲ್ಲ. ವರ್ಣನೆಯ ವಿವರ, ಔಚಿತ್ಯ, ಪಾತ್ರದ ಪಾತ್ರತೆ, ಭಾವವ್ಯಂಜನೆ, ಮರ್ಮಸ್ಪರ್ಶ, ತಂತ್ರಾನುಕೂಲ - ಇವುಗಳಿಗೆ ಒಗ್ಗುವಂತೆ ಇಲ್ಲಿಯ ಭಾಷೆಯ ಓಟವಿದೆ''.

ಡಾ. ಎಚ್. ಎಸ್. ರಾಘವೇಂದ್ರರಾವ್ ಅವರು ''ಹಾಸ್ಯಪ್ರಜ್ಞೆ ಮತ್ತು ಭಾವನೆಗಳಿಂದ ಆರ್ದ್ರವಾದ ಮನಸ್ಸುಗಳು ಇಲ್ಲಿನ ಕಥೆಗಳಲ್ಲಿ ಪೈಪೋಟಿ ನಡೆಸುತ್ತವೆ. ಇಂದಿನ ಚಿತ್ತಾಲರು ಇವನ್ನು ಬರೆದರೇ ಎಂದು ಸೋಜಿಗ ಪಡುವಷ್ಟು ವಿನೋದದ ಕಡೆಗೆ ಒಲಿಯುವ, ಒಂದು ತತ್ವದ ಸಲುವಾಗಿ, ಗುಂಡಾಭಟ್ಟರ ಮಡಿ, ಗಾನಪ್ರಿಯ ಶಂಭು ಶಾಸ್ತ್ರಿ, ಮುಕುಂದನ ದಾಕ್ಷಿಣ್ಯದಂಥ ಕಥೆಗಳು ಮಾಸ್ತಿಯವರಿಗಿಂತ ಹೆಚ್ಚಾಗಿ ಗೊರೂರರ ಬರಹದ ಮಾದರಿಯವು. ಚಿತ್ತಾಲರ ಮನಸ್ಸನ್ನು ಆತಂಕ, ವಿಷಾದಗಳು ಆಕ್ರಮಿಸಿದ ಮೇಲೆ ಅವರ ಬರವಣಿಗೆ ಇಂಥ ವಿನೋದಕ್ಕೆ ಬಾಹಿರವಾಯಿತು'' ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕೀರ್ತಿನಾಥ ಕುರ್ತಕೋಟಿಯವರು ಆಬೋಲಿನ ಕಥಾಸಂಕಲನದ ನವೀನತೆ, ಲೇಖಕರ ಪರಿಶ್ರಮದ ಬಗೆಗೆ ಹೀಗೆ ಹೇಳಿಕೊಂಡಿದ್ದಾರೆ: ''ಇಲ್ಲಿಯ ಎಲ್ಲ ಕಥೆಗಳಿಗೂ ಒಂದು ಪ್ರಬಲವಾದ ಉದ್ದೇಶವಿದೆ. ನಿಶ್ಚಿತವಾದ ರೂಪ ಆಕಾರಗಳಿವೆ, ಜೀವನದ ಲವಲವಿಕೆಯಿದೆ, ಪ್ರಾಣದ ಏರಿಳಿತಗಳಿವೆ. ಈ ಕಥೆಗಳ ಬರವಣಿಗೆಯ ರೀತಿ ಸಂಪೂರ್ಣವಾಗಿ ನವೀನವಾದದ್ದು. ಆದರೆ ಯಾವ ಕತೆಯನ್ನು ಅವರು ಕೇವಲ ತಂತ್ರದ

ಚಮತ್ಕಾರಕ್ಕಾಗಿಯಾಗಲಿ, ಪ್ರಯೋಗದ ಹಂಬಲಕ್ಕಾಗಿಯಾಗಲಿ ಬರೆದಿಲ್ಲ. ನವೀನತೆ ಈ ಕಥೆಗಳ ಅನಿವಾರ್ಯವಾದ ಅಭಿವ್ಯಕ್ತಿಯಾಗಿ ಮಾತ್ರ ಬಂದಿದೆ. ಪ್ರತಿಯೊಂದು ಕಥೆಯೂ ತನ್ನ ಆಕಾರವನ್ನು ತಾನೇ ಅನುರೂಪವಾಗಿ ನಿರ್ಮಿಸಿಕೊಂಡು, ರೇಶಿಮೆಯ ಹುಳ ಗೂಡುಕಟ್ಟಿಕೊಂಡು ಪಾತರಗಿತ್ತಿಯಾಗಿ ಹೊರಬೀಳುವಂತೆ, ಬಿಡುಗಡೆಯನ್ನು ಪಡೆಯುತ್ತದೆ. ಈ ರಚನಾವಿಧಾನದ ಕ್ರಮ ಈ ದೃಷ್ಟಿಯಿಂದ ಮಾತ್ರ ನವೀನವಾಗಿದೆ ಅಥವಾ ಈ ಸಂಗ್ರಹದ ವಿಶೇಷವೇ ಅದಾಗಿದೆಯೆಂದು ಹೇಳಬಹುದು.'' ಇನ್ನೂ ಮುಂದುವರೆದು ಮಾಸ್ತಿಯವರ ಕಥೆಗಳಂತೆ ಈ ಕಥೆಗಳೂ ಕೂಡಾ ಜೀವಂತತನವನ್ನು ಕಾಯ್ದುಕೊಂಡಿವೆಯೆಂದು ಹೇಳಿದ್ದಾರೆ. ಹಾಗೆಯೇ ''ಈ ಕಥೆಗಳ ಹೃದಯ ವೇಧಕತೆಯ ಬಗ್ಗೆಯಾಗಲಿ, ಶೈಲಿಯ ಪ್ರಸನ್ನತೆಯ ಬಗ್ಗೆಯಾಗಲಿ ಬಹಳ ಹೇಳಬೇಕಾದ ಕಾರಣವಿಲ್ಲೆಂದು ತೋರುತ್ತದೆ. ನನಗೆ ಮಹತ್ವದ್ದೆಂದು ತೋರಿದ್ದು ಅವರ ಪರಿಶ್ರಮ ಹಾಗೂ ಪ್ರಯತ್ನಶೀಲತೆಗಳೇ. ಮುಂಬಯಿಯಂಥ ಉಸಿರುಕಟ್ಟಿಸುವ ಆಧುನಿಕತೆಯ ವಾತಾವರಣದಲ್ಲಿದ್ದು, ಕನ್ನಡದ ಜೀವಂತ ಸಹವಾಸದಿಂದ ದೂರವಾಗಿಯೂ ಸಾಹಿತ್ಯದ ಬಗ್ಗೆ ಒಂದು ರೀತಿಯ ಧಾರ್ಮಿಕ ಶ್ರದ್ಧೆಯಿಂದ ಅವರು ಮುಂದುವರಿಯುತ್ತಿದ್ದಾರೆ'' ಎಂದು ತಮ್ಮ ಆಶಯ ವ್ಯಕ್ತಪಡಿಸಿದ್ದಾರೆ.

ಯಶವಂತ ಚಿತ್ತಾಲರು ಹೆಚ್ಚು ವಿಮರ್ಶಾಲೋಕಕ್ಕೆ ಪರಿಚಿತರಾದದ್ದು 'ಆಟ' ಕಥಾಸಂಕಲನದ ಮೂಲಕ. ಏಕೆಂದರೆ ಈ ಹಿಂದೆ ಬಂದ ಎರಡು ಕಥಾಸಂಕಲನಗಳ ಬಗೆಗೆ ಅಷ್ಟೊಂದು ಚರ್ಚೆ, ವಿಮರ್ಶೆ ನಡೆದಿರಲಿಲ್ಲ. 'ಆಟ' ಕಥಾಸಂಕಲನವನ್ನು ನಾಡಿನ ಹಲವಾರು ವಿದ್ವಾಂಸರು ಗಮನಿಸಿ ತಮ್ಮ ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ. ಸಂಕಲನದ ಮುನ್ನುಡಿಯಲ್ಲಿ ಗೋಪಾಲಕೃಷ್ಣ ಅಡಿಗರು ಮೆಚ್ಚಿಗೆಯ ಮಾತುಗಳನ್ನಾಡುತ್ತಾ ''ಈ ಸಂಕಲನದಲ್ಲಿರುವ ಕಥೆಗಳೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಸಾರ್ಥಕವಾಗಿರುವುವು ಮಾತ್ರವಲ್ಲ, ಕಥೆಗಳೆಲ್ಲಕ್ಕೂ ಚಿತ್ತಾಲತನದ ಮುದ್ರೆ ಬಿದ್ದಿದೆ ಎಂಬುದನ್ನು ಒತ್ತಿ ಹೇಳಬೇಕು. ವಸ್ತು, ಭಾಷೆ, ಪಾತ್ರ, ವರ್ಣನೆ ಈ ಎಲ್ಲದರಲ್ಲೂ ಸ್ವತಂತ್ರ ವ್ಯಕ್ತಿತ್ವದ ಮೂಲಭೂತ ಚಿಂತನದ ಹೊಳಹು ಕಾಣುತ್ತದೆ. ಈ ಕಥೆಗಳ ಭಾಷೆಯಲ್ಲಿ ಇನ್ನು ಎಲ್ಲೂ ಕಾಣಿಸದ ಒಂದು ಆತ್ಮೀಯತೆ, ಸಹಜತೆ, ಮಣ್ಣಿನ ವಾಸನೆಯಿದೆ. ಉತ್ತರ ಕನ್ನಡ ಜಿಲ್ಲೆಯ ಬಂಕಿಕೊಡ್ಲ-ಗೋಕರ್ಣಗಳ ಪರಿಸರದ ವಿಶಿಷ್ಟ ಕನ್ನಡದ ಹೊಗರು ಉದ್ದಕ್ಕೂ ಇಲ್ಲಿನ ಶೈಲಿಯನ್ನು ಜೀವಂತಗೊಳಿಸಿ ಚುರುಕಾಗಿರಿಸಿ ಅದನ್ನು ಆಡುಮಾತಿಗೆ ಹತ್ತಿರ ತರುತ್ತದೆ. ಕಥೆಗಾರನ ಸುಸಂಸ್ಕೃತ ಭಾಷೆ, ರೀತಿಯೊಂದಿಗೆ, ಅದು ಸಮರಸವಾಗಿ ಬೆರೆತು ಆ ಮೂಲಕ ಪ್ರತಿಯೊಂದು ಕಥೆಗೂ ಅತ್ಯವಶ್ಯಕವಾದ ಬದುಕಿನ ಸಾಮಿಪ್ಯ ಮತ್ತು ಅತ್ಯವಶ್ಯವಾದ ದೂರ ಎರಡೂ ಇಲ್ಲಿ ಸಿದ್ಧಿಸುತ್ತದೆ. ಅರ್ಥಕ್ಕೆ ಸಲ್ಲದ ಕೇವಲ ಮಾತಿನಬ್ಬರ ಎಲ್ಲೂ ಕಾಣದೆ ಪ್ರತಿ ಮಾತೂ ಭಾವ ವಿಚಾರ ಸ್ಪಂದಗಳ ಸೂಕ್ಷ್ಮ ಆವಿಷ್ಕಾರವಾಗಿ ಸಾರ್ಥಕವಾಗುತ್ತದೆ'' ಎಂದಿದ್ದಾರೆ. ಅಡಿಗರು ಈ ಸಂಕಲನದ 'ಸೆರೆ' ಕಥೆಯನ್ನು ಕನ್ನಡದ ಶ್ರೇಷ್ಠ ಕಥೆಗಳಲ್ಲಿ ಒಂದೆಂದು ಪರಿಗಣಿಸುತ್ತ ''ಇಲ್ಲಿ ವರ್ಣನೆ, ಪಾತ್ರ ಚಿತ್ರಣ, ಘಟನಾ ಪರಂಪರೆ ಈ ಎಲ್ಲವೂ ಒಟ್ಟಿಗೆ ಒಂದು ರೂಪಕದ ಹಾಗೆ ಬೆಳೆದು ಕಥೆಯ ವಾಸ್ತವಿಕ ದೇಹ ಕಥೆಗಾರರ ವಿಶಿಷ್ಟ ಅನುಭವವೊಂದಕ್ಕೆ ತಕ್ಕ

ಶರೀರವಾಗಿ ಸಾರ್ವತ್ರಿಕ ಸಾರ್ವಕಾಲಿಕ ಎನ್ನಬಹುದಾದ ಸತ್ಯವೊಂದನ್ನು ಧ್ವನಿಸುತ್ತದೆ'' ಎಂದು ಹೇಳಿರುವುದು ಸೂಕ್ತವಾದುದಾಗಿದೆ. ಎಚ್. ಕೆ. ರಾಮಚಂದ್ರ ಮೂರ್ತಿಯವರು 'ಸೆರೆ' ಕಥೆಯು ಉತ್ಕೃಷ್ಟ ಕಥೆಗಳ ಸಾಲಿಗೆ ಸೇರುವಂತಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅವರೇ ಹೇಳುವಂತೆ ''ಪ್ರಯತ್ನಪೂರ್ವಕವಾಗಿ ಅಂತರಂಗದ ನೆಲಮಾಳಿಗೆಯಲ್ಲಿ ಸೆರೆಯಿಟ್ಟ ಕಾಮ ಪ್ರವೃತ್ತಿ, ಕೋತಿಯಂತೆ ಭಾವಣೆಯಿಂದ ತೂರಿ ಬಂದು ಭೂತಗಳ ನಡುವೆ ನುಸುಳಿ ಹಲ್ಲು ಕಿರಿಯುತ್ತದೆ. ಅದುಮಿಟ್ಟ ಆಸೆ ಆತಂಕಗಳು ಪ್ರಲೋಭನಗಳು, ಪ್ರಯಾಸದಿಂದ ಮುಚ್ಚಿದ ಬಾಗಿಲನ್ನು ಒಡೆದು ಹೊರನುಗ್ಗಿ, ಆರೋಗ್ಯವಾಗಿ ಉಸಿರಾಡಲು ಅವಶ್ಯಕವಾದ ಸಹಜತೆಯ ಆಮ್ಲಜನಕಕ್ಕಾಗಿ ತುಡಿಯುತ್ತವೆ. ಭಾವಸಾಂದ್ರವಾದ ಈ ಕಥಾವಸ್ತುವನ್ನು ಅರ್ಥದಿಂದ ತೂಗಿ ತೊನೆಯುವ ಮಾತಿನಲ್ಲಿ ನಿರೂಪಿಸುವ ಚಿತ್ತಾಲರ ಶೈಲಿ ಹೃದಯ ವೇದ್ಯವಾಗಿದೆ. '' ಯು. ಆರ್. ಅನಂತಮೂರ್ತಿಯವರು ''ಸೆರೆ ಸೃಷ್ಟಿಯ ಕ್ರಿಯೆ ಸಂಪೂರ್ಣವಾಗಿ ಚಿತ್ತಾಲರಲ್ಲಿ ನಡೆಯುತ್ತದೆ. ಅದಕ್ಕಾಗಿ ಇವರು ತಮ್ಮ ಶಕ್ತಿಗಳನ್ನೆಲ್ಲ ಪ್ರತಿಕೃತಿಯಲ್ಲೂ ಕೇಂದ್ರಿಕರಿಸಿ ಕೊಡುತ್ತಾರೆ ಎಂಬುದಕ್ಕೆ ಸಾಕ್ಷಿಯಾಗಿದೆ'' ಎಂದು ಹೇಳಿದ್ದಾರೆ.

ಕಲಾತ್ಮಕತೆ – ಈ ಸಂಕಲನದಲ್ಲಿ ಕಂಡು ಬರುವ ಬಹುಮುಖ್ಯ ಗುಣವೆಂದು ಜಿ.ಎಚ್. ನಾಯಕ ಹಾಗೂ ಶಾಂತಿನಾಥ ದೇಸಾಯಿಯವರು ಗುರುತಿಸಿದ್ದಾರೆ. ''ಆಟ ಸಂಕಲನದ ಕಥೆಗಳಲ್ಲಿ ಚಿತ್ತಾಲತನದ ಮುದ್ರೆ ಅನನ್ಯವಾದ ರೀತಿಯಲ್ಲಿ ಎದ್ದು ಕಾಣುತ್ತದೆ. ಕಲಾತ್ಮಕ ಅಚ್ಚುಕಟ್ಟು ಒಂದನ್ನೇ ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಚಿತ್ತಾಲರು ಬಹುಶಃ ನವ್ಯ ಕಥೆಗಾರರಲ್ಲೆಲ್ಲ ಶ್ರೇಷ್ಠರು. ಸಾವಿನವಸ್ತು ಅವರನ್ನು ಬಹುವಾಗಿ ಕಾಡುತ್ತಿರುವಂತೆ ಕಾಣುತ್ತದೆ. ಆದರೆ ಅದೊಂದು ಅವರಲ್ಲಿ ಬಲವಾದ ಬೌದ್ಧಿಕ ಇಲ್ಲವೆ ತಾತ್ವಿಕ ಕಾಳಜಿ ಆಗಿಲ್ಲದೆ ಕೇವಲ ಬೆರಗಿಗೆ ಕಾರಣವಾಗುವ ಸಂಗತಿಯಾಗಿದೆ'' ಎಂದು ಜಿ. ಎಚ್. ನಾಯಕರು ಹೇಳಿದರೆ, ಶಾಂತಿನಾಥ ದೇಸಾಯಿಯವರು '' ಚಿತ್ತಾಲರ ಆಟ ಅವರ ಕಲಾಸಿದ್ಧಿಯ ಒಂದು ಶಿಖರವೆಂದು ಹೇಳಬಹುದು (ಅದು ಕನ್ನಡ ಕಥಾ ಪ್ರಪಂಚದ ಒಂದು ಶಿಖರವೂ ಹೌದು)'' ಎನ್ನುವಲ್ಲಿ ಚಿತ್ತಾಲರ ಕಲಾತ್ಮಕತೆಯನ್ನು ವಿಮರ್ಶಕರು ಸರಿಯಾಗಿ ಗುರುತಿಸಿದ್ದಾರೆನ್ನಬಹುದು.

ಕನ್ನಡದ ಅತ್ಯುತ್ತಮ ಕಥಾಸಂಕಲನಗಳಲ್ಲಿ ಒಂದಾದ 'ಕತೆಯಾದಳು ಹುಡುಗಿ' ಯಶವಂತ ಚಿತ್ತಾಲರ ಬರವಣಿಗೆಯ ಬೆಳವಣಿಗೆಯನ್ನು ಸ್ಪಷ್ಟವಾಗಿ ತೋರಿಸುತ್ತದೆ. ಕೃತಿಯ ಆರಂಭದಲ್ಲಿ ಎಸ್. ದಿವಾಕರ್ ಅವರು ಹೇಳಿರುವ ಮಾತುಗಳು ಚಿತ್ತಾಲರ ಪ್ರತಿಭೆಗೆ ಸಾಕ್ಷಿಯೆನ್ನುವಂತಿದೆ: ''ಈ ಎಲ್ಲ ಕಥೆಗಳಲ್ಲೂ ಚಿತ್ತಾಲರ ಆತ್ಮಚರಿತ್ರೆಯ ಅಂಶಗಳಿವೆ. ಅವರ ವೈಯುಕ್ತಿಕ ಬದುಕಿನ ಬೇರುಗಳಿವೆ. ಮಾನವ ಜಗತ್ತನ್ನು ಕಂಡುಹಿಡಿದು ಅದನ್ನು ದಾಖಲೆಗೊಳಿಸುವಂಥ ಕಥಾಸಾಹಿತ್ಯದ ನಿಜವಾದ ಉದ್ದೇಶವನ್ನು ಸಾಧಿಸುವ ಈ ಕಥೆಗಳು ಒಂದು ಕ್ರಿಯಾಶೀಲ ಮನಸ್ಸಿನ ಹರಹಿಗೆ ಸಾಕ್ಷಿಯಾಗುತ್ತವೆ. ಮಾರ್ಕ್ಸ್, ಯೂಂಗ್, ಕಾರ್ನಾಡ್, ಲೊರೆಂಜ್, ಕೆಸಿರರ್ ಮೊದಲಾದವರ ವಿಚಾರಗಳಿಂದ ಪ್ರಭಾವಿತರಾಗಿರುವ ಚಿತ್ತಾಲರ ವೈಚಾರಿಕ ಪ್ರಪಂಚ, ಲೇಖಕರಾಗಿ

ಅವರು ನಮ್ಮ ಬದುಕನ್ನು ಮತ್ತು ಅದನ್ನು ನಿರ್ಮಿಸುತ್ತಿರುವ ಮಾನವರನ್ನು ಹೊಸಬೆಳಕಿನಲ್ಲಿ ನೋಡಲು ನೆರವಾಗುತ್ತದೆ. ಇವತ್ತಿನ ಮನುಷ್ಯನ ಬಗ್ಗೆ ಹೊಸದೊಂದನ್ನೇ ಹುಡುಕಿ ಹೇಳಲು ಪ್ರಯತ್ನಿಸುತ್ತಿರುವ ಚಿತ್ತಾಲರು ಈ ಸಂಕಲನದಲ್ಲಿ ಮಾಡಿರುವ ಪ್ರಯೋಗಗಳೂ ಸಹ ವಸ್ತುವಿನ ಸಂಕೀರ್ಣತೆಯಿಂದ ಅನಿವಾರ್ಯವೆನ್ನಿಸಿ ಯಶಸ್ಸು ಪಡೆದಿವೆ''. ವಿಕಾಸವಾದ, ಮಾನವಶಾಸ್ತ್ರ, ಮನೋವಿಜ್ಞಾನ, ಮಾರ್ಕ್ಸವಾದ ಹೀಗೆ ಅನೇಕ ಕ್ಷೇತ್ರಗಳ ವೈಚಾರಿಕ ಸಂಪತ್ತಿನಿಂದ ಸಮೃದ್ಧವಾದ ಅವರ ಮನಸ್ಸು ಜೀವನದ ಅಸಂಗತಮುಖ, ತೇಜೋವಧೆಯ ಅಥವಾ ಮಾನವ ಘನತೆಯ ಸಂಭಾವ್ಯ, ಹಿಂಸೆ ಮತ್ತು ಸಾವುಗಳ ಅನಿವಾರ್ಯ, ಬದುಕಿನಲ್ಲಿ ತಲೆಹಾಕುವ ಆಕಸ್ಮಿಕ, ಹಾಗೂ ಸೋಲಿನ ಎದುರಿನಲ್ಲಿ ವಿರೋಧಾತ್ಮವಾಗಿ ಸೆಣಸುವ ಮಾನವವ್ಯಕ್ತಿತ್ವದ ದೃಢೀಕರಣ ಇವುಗಳನ್ನು ಬುಡಮಟ್ಟ ವಿಶ್ಲೇಷಿಸುತ್ತದೆ.

ಲೇಖಕರ ಚೈತನ್ಯಶೀಲ ಪ್ರತಿಭೆ ಈ ಸಂಕಲನದಲ್ಲಿ ದಾಖಲಾಗಿರುವುದನ್ನು ಶಾಂತಿನಾಥ ದೇಸಾಯಿಯವರು ಗುರುತಿಸುತ್ತಾ ''ದಟ್ಟ ಅನುಭವಗಳ ಸೂಕ್ಷ್ಮಾತಿಸೂಕ್ಷ್ಮಗಳನ್ನು ಹಿಡಿಯಲು ತವಕಿಸುವ ಸಂಕೀರ್ಣತೆ ಹಾಗೂ ಜೀವಂತ ಭಾವನೆಗಳಲ್ಲಿ ಹುಟ್ಟಿ ಬರುವ ಸಾಂಕೇತಿಕತೆ, ಇವುಗಳ ಜೊತೆಗೇ ಚಿತ್ತಾಲರ ಆಸ್ಥೆಗಳ ಕ್ಷಿತಿಜವೂ ಅತ್ಯಂತ ವಿಸ್ತಾರಗೊಂಡದ್ದನ್ನು ಕಾಣಿಸುವ ಈ ಕಥೆಗಳು ವೈವಿಧ್ಯಪೂರ್ಣವಾದ, ಕೆಲವು ವಿಷಯಗಳಲ್ಲಿ ಕನ್ನಡಕ್ಕೇ ಹೊಸತೆನ್ನಿಸುವ ಪ್ರಯೋಗಗಳಾಗಿವೆ.''

ಸಮಕಾಲೀನ ಬದುಕಿಗೆ-ಅದರ ಸಾಮಾಜಿಕ, ಸಾಂಸ್ಕೃತಿಕ ಸಮಸ್ಯೆಗಳ ಆಘಾತಗಳಿಗೆ ತೀವ್ರವಾಗಿ ಪ್ರತಿಸ್ಪಂದಿಸುವ ಗತಿಶೀಲ ಸಂವೇದನೆ, ವೈಜ್ಞಾನಿಕ ಮಾನವತಾವಾದದಲ್ಲಿ ಆಳವಾಗಿ ಬೇರುಬಿಟ್ಟ ಜೀವನದೃಷ್ಟಿ ಮತ್ತು ಕಲಾಪ್ರಜ್ಞೆ ಇವೆಲ್ಲ ಒಂದಾಗಿ ಕಟ್ಟಿದ 'ಕಲಾಕೋಶ'ಗಳಲ್ಲಿ ತುಡಿಯುತ್ತಿದ್ದದ್ದು ಮಾನವೀ ಸ್ವಾತಂತ್ರ್ಯದ ಬಗೆಗಿನ, ಮಾನವೀ ಸಂಬಂಧ ಹಾಗೂ ಸೃಷ್ಟಿಶೀಲತೆಗಳ ಬಗೆಗಿನ ಜೀವಂತ ಪ್ರಜ್ಞೆ.

ಸೃಜನಶೀಲ ಕಲ್ಪಕತೆ ಹಾಗೂ ಚಿಂತನೆಗಳಲ್ಲಿ ದೃಷ್ಟಿಗೋಚರವಾದ ಮನುಷ್ಯ ಸಾಧ್ಯತೆಗಳಿಂದ ಪುಲಕಿತಗೊಂಡ, ಜೊತೆಗೇ ಬದುಕಿನ ಅನಂತ ರಹಸ್ಯಗಳ ಬಗ್ಗೆ ಬೆರಗು ತುಂಬಿದ ಪ್ರೀತಿಯುಳ್ಳ ಮನಸ್ಸೊಂದು ಇಲ್ಲಿ ಕಾರ್ಯಪ್ರವೃತ್ತವಾಗಿದೆ.

ಕನ್ನಡ ಕಥಾ ಪ್ರಪಂಚದಲ್ಲಿ 'ಆಟ'ದಂತೆ 'ಕತೆಯಾದಳು ಹುಡುಗಿ' ಕೂಡ ಒಂದು ಅತ್ಯಂತ ಗಟ್ಟಿಯಾದ ಮಹತ್ವದ ಕೃತಿಯಾಗಿದೆ.

ಡಾ. ಎಚ್. ಎಸ್. ರಾಘವೇಂದ್ರರಾವ್ ಅವರು ''ಎಪ್ಪತ್ತರ ದಶಕದಲ್ಲಿ ಕನ್ನಡ ಸಾಹಿತ್ಯ ಸನ್ನಿವೇಶದಲ್ಲಿ ಮೂಡಿಬಂದ ಹಲವಾರು ಸಾಹಿತ್ಯಕ, ಸಾಮಾಜಿಕ ಆಂದೋಲನಗಳನ್ನು ಆಸಕ್ತಿಯಿಂದ ಗಮನಿಸುತ್ತ ಬಂದ ಚಿತ್ತಾಲರು, ತಮ್ಮ ಸೃಜನಶೀಲ ಚೈತನ್ಯವನ್ನೇ ಪಣವಾಗಿ ಒಡ್ಡಿ ನಿರ್ಮಿಸಿದ ಕಥೆಗಳು ಇಲ್ಲಿವೆ. ಸಮಕಾಲೀನ ಸಮಾಜದ ಸಮಸ್ಯೆಗಳನ್ನು ಸಾಹಿತಿಯಾದವನು ತನ್ನ ಮಾಧ್ಯಮದ ಅನನ್ಯತೆಯನ್ನು ಒಂದಿಷ್ಟು

ಬಿಟ್ಟುಕೊಡದೆ, ಅದರ ಎಲ್ಲ ಸಂಕೀರ್ಣತೆಯೊಂದಿಗೆ ಗ್ರಹಿಸಿರುವುದಕ್ಕೆ ಇಲ್ಲಿ ನಿದರ್ಶನಗಳು ದೊರೆಯುತ್ತವೆ. ಅಲ್ಲದೆ ತಾನು ಕಂಡ ಲೋಕವನ್ನು ತನ್ನ ಓದುಗರೊಂದಿಗೆ ಹಂಚಿಕೊಳ್ಳಬೇಕೆಂಬ ತೀವ್ರ ಹಂಬಲದ ಫಲವಾಗಿ ಕಥೆಗಾರರು ಸಂವಹನ ಸಮಸ್ಯೆಯನ್ನು ಬಿಡಿಸಿಕೊಳ್ಳುತ್ತಾರೆ.

ಓದುಗರ ಭಾವನಾತ್ಮಕ ತೊಡಗುವಿಕೆಯನ್ನು ಬಯಸುವ ಈ ಕಥೆಗಳು ಅವರ ಕುತೂಹಲದ ಅನುಭವದ ಸೀಮೆಗಳನ್ನು ವಿಸ್ತರಿಸುತ್ತವೆ''ಎಂದಿದ್ದಾರೆ.

ಡಾ. ಬಸವರಾಜ ಕಲ್ಗುಡಿಯವರು ಈ ಸಂಕಲನದ ಬಗೆಗೆ ಲೇಖನವೊಂದರಲ್ಲಿ ವಿವೇಚಿಸುತ್ತಾ '' ಚಿತ್ತಾಲರ 'ಕತೆಯಾದಳು ಹುಡುಗಿ' ಕಥಾ ಸಂಕಲನವು ಜೀವನ, ಬದುಕಿನ ಬಗ್ಗೆ ವ್ಯಕ್ತಿಯು ಸ್ಪಂದಿಸುವ ಹಾಗೂ ತೆಗೆದುಕೊಳ್ಳುವ ನಿರ್ಧಾರಗಳ ದೃಷ್ಟಿಯಿಂದ ಹಲವಾರು ಅವಸ್ಥಾಂತರಗಳನ್ನು ನಿರಂತರ ಬೆಳವಣಿಗೆಯನ್ನು ಕಂಡುಕೊಂಡಿರುವ ಕಥೆಗಳನ್ನು ಒಳಗೊಂಡಿದೆ ಎಂದು ಖಚಿತವಾಗಿ ಹೇಳಬಹುದು. ಈ ದೃಷ್ಟಿಯಿಂದ ಅದು ಅವರ ಕಥೆಗಳ ಪ್ರಾತಿನಿಧಿಕ ಸಂಕಲನವೂ ಹೌದು. 'ಬೀಗದಕೈ' ಕಥೆಯ ಅನುಭವವನ್ನು ಗ್ರಹಿಸದ, ಎದುರಿಸದ ದುರ್ಬಲ ನಾಯಕನಿಂದ, ಮನುಷ್ಯನ ಬದುಕಿಗೆ ಹೊಸ ಅರ್ಥವನ್ನು, ಪ್ರೀತಿಯ ಸೃಜನಶೀಲತೆಯನ್ನು ತರಬೇಕೆಂದು ಕ್ರಿಯೆಗೆ ತೊಡಗುವ ನಿರ್ಧಾರ ಮಾಡುವಂಥ ಗಟ್ಟಿ, ದೃಢ ವ್ಯಕ್ತಿತ್ವವೊಂದರ ಚಿತ್ರಣದವರೆಗೆ ಕಥೆಗಳ ಬೆಳವಣಿಗೆ ಕಂಡು ಬರುತ್ತದೆ. ಇಲ್ಲಿನ ಕಥೆಗಳ ಆಶಯದ ಬೆಳವಣಿಗೆ ಕಂಡು ಬರುತ್ತದೆ. ಇಲ್ಲಿನ ಕಥೆಗಳ ಆಶಯದ ಬೆಳವಣಿಗೆಗಳು ಮನುಷ್ಯನ ಮಾಗುವ ಕ್ರಿಯೆಯನ್ನು ಪರೋಕ್ಷವಾಗಿ ಸೂಚಿಸುತ್ತವೆ'' ಎಂದಿದ್ದಾರೆ.

ಓದುಗರನ್ನು ಗಮನದಲ್ಲಿಟ್ಟುಕೊಂಡು ಈ ಕಥಾಸಂಕಲನದ ಬಗೆಗೆ ಟಿ.ಪಿ. ಅಶೋಕ ಅವರು ಹೇಳುತ್ತಾ ''ಸಮಷ್ಟಿಯ ನೋವಿನಲ್ಲಿ ಓದುಗರನ್ನು ಪಾಲುದಾರರನ್ನಾಗಿ ಮಾಡಿ ನೋವಿನ ಮೂಲಕವೇ ಕಾಣದ ಸತ್ಯಗಳ ದರ್ಶನ ಮಾಡಿಸುತ್ತದೆ..... ಬರೆಯುವ ಮೂಲಕವೇ ಕಥೆಗಾರ ತನ್ನ ವಿಮೋಚನೆಯನ್ನು ಕಂಡುಕೊಳ್ಳಬೇಕಾದಂತೆ ಈ ಕಥೆಗಳನ್ನು ಓದುವುದರ ಮೂಲಕ ಓದುಗರು ತಮ್ಮ ತಮ್ಮ ವಿಮೋಚನೆಯನ್ನು ಕಂಡುಕೊಳ್ಳುತ್ತಾ ಹೋಗುತ್ತಾರೆ'' ಎಂದು ಅಭಿಪ್ರಾಯ ಪಡುತ್ತಾರೆ.

ಹೀಗೆ ಹಲವಾರು ವಿಮರ್ಶಕ ವಿದ್ವಾಂಸರು, ಓದುಗರಿಂದ ಈ ಕಥಾಸಂಕಲನದ ಬಗೆಗೆ ಪ್ರತಿಕ್ರಿಯೆಗಳು ಬಂದಿರುವುದನ್ನು ನೋಡಿದರೆ ಅದರ ಮಹತ್ವದ ಅರಿವು ನಮಗಾಗಲೇ ಇರಲಾರದು.

ಆಟ, ಕತೆಯಾದಳು ಹುಡುಗಿ ಸಂಕಲನಗಳಷ್ಟು ಜನಪ್ರಿಯತೆಯನ್ನು ಗಳಿಸದ 'ಬೇನ್ಯಾ' ವಿಮರ್ಶಕರು ಅಷ್ಟೊಂದು ಗಮನ ಹರಿಸಲಿಲ್ಲವೆಂದೇ ಹೇಳಬೇಕು. ಆದರೂ ಲೇಖಕರ ಸೃಜನಶೀಲ ಪ್ರತಿಭೆಯನ್ನು ಇಲ್ಲಿಯೂ ಕಡೆಗಣಿಸುವಂತಿಲ್ಲ.

ಚಿತ್ತಾಲರ ಈ ಹಿಂದೆ ಬಂದ ಕಥಾಸಂಕಲನಗಳಿಗಿಂತ ತೀರಾ ಭಿನ್ನವಾದ 'ಸಿದ್ಧಾರ್ಥ' ಕೃತಿಯು ದೀರ್ಘವಾದ ಕಥೆಗಳನ್ನೊಳಗೊಂಡಿದೆ. ವಾಸುದೇವ ನಾಡಿಗ ಅವರು ಇದರ ಭಿನ್ನತೆಯನ್ನು ಗುರುತಿಸಿದ್ದಾರೆ. ಅವರು ಹೇಳುವಂತೆ ''ಚಿತ್ತಾಲರು ತಮ್ಮ ಸೃಜನಪ್ರತಿಕ್ರಿಯೆಯ 'ಜೀವಸೆಲೆ' ಎಂದು ಮುಖ್ಯವಾಗಿ ತಾವೇ ಗುರುತಿಸಿಕೊಡುವ ಹನೇಹಳ್ಳಿ ಸಂಸ್ಕೃತಿಯಿಂದ ಇಲ್ಲಿನ ಕಥೆಗಳು ತುಂಬಾ ಅಂತರವನ್ನು ಸಾಧಿಸಿವೆ. ಮುಂಬೈನಂತಹ 'ಯಂತ್ರನಗರ'ದೊಂದಿಗಿನ ಚಿತ್ತಾಲರ ಸಾಂಸ್ಕೃತಿಕ ಸಂಬಂಧ, ಸ್ಥಾಪಿತಗೊಂಡ ಪ್ರಕ್ರಿಯೆ ಇಲ್ಲಿ ಗಟ್ಟಿಗೊಳ್ಳುತ್ತ ಹೋಗುತ್ತದೆ. 'ಸಿದ್ಧಾರ್ಥ' ಕಥಾಪ್ರಪಂಚವೇ ವಿಭಿನ್ನ ಸಂಸ್ಕೃತಿಯದು. ಹನೇಹಳ್ಳಿಯ ಭಾವ ಪ್ರತಿಮೆಗಳಾದ ಉತ್ತುಮಿ, ಪಾರೂ, ಗಿರಿಯಣ್ಣ..... ಬೇಲಿಗಳು, ಅಡ್ಡೆ, ಪಗಾರ, ದಣಪೆಗಳು, ಗದ್ದೆ, ಗುಡಿಸಲುಗಳು, ಜಾತ್ರೆ, ತೇರು, ಹೊಳೆ.... ಗಳು ಮಾಯವಾಗಿ ಇವುಗಳ ಜಾಗದಲ್ಲಿ ಸಮುದ್ರ ತೀರ, ಎತ್ತರದ ಕಾಂಕ್ರೀಟ್ ಕಾಡು, ಪ್ಲಾಟುಗಳು, ಬಾಂದ್ರಾ, ರೇಲ್ವೆ ಸ್ಟೇಷನ್, ಕಂಪನಿಗಳು, ಟ್ಯಾಕ್ಸಿ, ಝೋಪಡ್ಪಾಪಟ್ಟಿಗಳು 'ಜೀವಂತಿಕೆ'ಯನ್ನು ಪಡೆದುಕೊಳ್ಳುತ್ತವೆ. ಜೊತೆ ಜೊತೆಗೆ ನಗರ ಜೀವನ ಯಂತ್ರ ನಾಗರೀಕತೆ, ಕೃತಕತೆ, ಅನಾಥತೆ, ಮಾನವೀಯ ಸಂಬಂಧಗಳ ಪೊಳ್ಳುತನ ವ್ಯವಹಾರಿಕೆ, ಒಣರಾಜಕೀಯಗಳಂತಹ ಭಾವವಿನ್ಯಾಸದ ಬದಲಾವಣೆಗಳೂ ಅನುಭವಕ್ಕೆ ಬರುತ್ತವೆ.''

ಚಿತ್ತಾಲರ ಕಥಾಸಾಹಿತ್ಯವನ್ನು ಕುರಿತಂತೆ ಬಂದ ವಿದ್ವಾಂಸರ ಪ್ರಮುಖವಾದ ಹೇಳಿಕೆಗಳಿವು. 'ಸಂದರ್ಶನ'ದಿಂದ 'ಸಿದ್ಧಾರ್ಥ'ದ ವರೆಗಿನ ಕಥೆಗಳನ್ನು ಅವಲೋಕಿಸಿದಾಗ ಚಿತ್ತಾಲರ ಸೃಜನಶೀಲ ಬರವಣಿಗೆಯು ಹಂತ ಹಂತವಾಗಿ ಬೆಳೆದಿರುವುದನ್ನು ಕಾಣಬಹುದು. ಹಾಗೆಯೇ ಬದುಕು ಮತ್ತು ಸಾಹಿತ್ಯ ಒಂದಕ್ಕೊಂದು ಹೇಗೆ ಅನ್ಯೋನ್ಯ ಸಂಬಂಧವನ್ನು ಹೊಂದಿವೆಯೆಂಬುದನ್ನು ಇಲ್ಲಿನ ಕೆಲವು ಕಥೆಗಳು ತಿಳಿಸಿಕೊಡುತ್ತವೆ.

**ಕಾದಂಬರಿ ಸಾಹಿತ್ಯ**

ಕಥಾಸಾಹಿತ್ಯದಂತೆ ಚಿತ್ತಾಲರ ಕಾದಂಬರಿ ಸಾಹಿತ್ಯವನ್ನು ವಿದ್ವಾಂಸರು, ಓದುಗರು ಸ್ವಾಗತಿಸಿದ್ದಾರೆ. ಶ್ರೀರಂಗ, ಕೀರ್ತಿನಾಥ ಕುರ್ತಕೋಟಿ, ಶಾಂತಿನಾಥ ದೇಸಾಯಿ, ಜಿ.ಎಸ್.ಆಮೂರ, ಎಚ್. ಎಸ್. ರಾಘವೇಂದ್ರರಾವ್. ಎಲ್. ಎಸ್. ಶೇಷಗಿರಿರಾವ್, ಕೆ. ವಿ. ನಾರಾಯಣ, ಟಿ. ಪಿ. ಅಶೋಕ, ಕ. ವೆಂ. ರಾಜಗೋಪಾಲ, ವಿಶ್ವನಾಥ ದೇಸಾಯಿ, ಶಂಕರ ಮೊಕಾಶಿ ಪುಣೇಕರರರನ್ನೊಳಗೊಂಡಂತೆ ಹಲವಾರು ವಿದ್ವಾಂಸರು ಚಿತ್ತಾಲರ ಕಾದಂಬರಿಗಳ ಬಗೆಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಹೇಳಿದ್ದಾರೆ.

'ಮೂರುದಾರಿಗಳು' ಕಾದಂಬರಿಯಲ್ಲಿ ಕಂಡುಬರುವ ಸಾಮಾಜಿಕ ವ್ಯವಸ್ಥೆಯನ್ನು ಗುರುತಿಸುತ್ತಾ ಶ್ರೀರಂಗರು ''ಲೇಖಕರು ಇಲ್ಲಿ ಚಿತ್ರಿಸಬಯಸಿದ್ದು ಒಂದು ಕಥೆಯನ್ನಲ್ಲ, ಆ ಕಥೆಯನ್ನು ಶಕ್ಯವನ್ನಾಗಿ, ಸಂಭವನೀಯವನ್ನಾಗಿ ಮಾಡಿದ ಉತ್ತರ ಕನ್ನಡ ಜಿಲ್ಲೆಯ ಒಂದು ಸಮಾಜ ಜೀವನವನ್ನು. ಅದಕ್ಕೆಂದೇ ಇಲ್ಲಿ ಆ ಸಮಾಜದ

ನಾನಾಸ್ತರಗಳಲ್ಲಿದ್ದ ವ್ಯಕ್ತಿಗಳು ಸುಳಿದಾಡುತ್ತಿವೆ. ಸಂಭಾಷಣೆಯ ಶೈಲಿ ಮತ್ತು ಸ್ವಭಾವ ಚಿತ್ರಣದಿಂದ ಸಾಮಾನ್ಯವಾಗಿ ಎಲ್ಲ ಪಾತ್ರಗಳೂ ಜೀವಂತ ಎನ್ನಿಸುವುದು ಈ ತರುಣ ಲೇಖಕರ ಯೋಗ್ಯತೆಯ ಲಕ್ಷಣವಾಗಿದೆ. ವ್ಯಕ್ತಿಗಳು ಜೀವಂತವಾದುದರಿಂದ ಸಮಾಜದ ಚಿತ್ರಣವೂ ನಮ್ಮ ಕಣ್ಣಮುಂದೆ ಕಟ್ಟಿ ನಿಲ್ಲುವುದು. ಅದರಲ್ಲೂ ವಿಶ್ವನಾಥನ ಅತ್ತಿಗೆಯಾದ ರಾಧಮ್ಮ, ಕೆಲಮಟ್ಟಿಗೆ ತುಂಗಕ್ಕ, ದೇವಪ್ಪ ಮಾಸ್ತರರು - ಈ ಪಾತ್ರ ಚಿತ್ರಣ ಸ್ವಭಾವ ಸಹಜವಾಗಿದೆ. ಇಡೀ ಕಥೆಗೆ ಮೂಲ ಪ್ರೇರಕನಾದ ಫೋಟೋಗ್ರಾಫರ್ ರಂಗಪ್ಪನ ಬಗ್ಗೆ ಮೊದಲಿನಿಂದ ಕೊನೆಯವರೆಗೆ ಉಲ್ಲೇಖವಿದ್ದಾಗಲೂ ಅವನು ನಿಜವಾಗಿ ಎಂತಹವನಿದ್ದ ಎಂಬುದನ್ನು ತೋರಿಸಲು ಕೂಡ ಅವನ ಪಾತ್ರವನ್ನು ಸಾಕ್ಷಾತ್ತಾಗಿ ತಾರದೆ ಇದ್ದದ್ದು ಈ ಚಾಡಿಕೋರ ಸಮಾಜವನ್ನು ಚಿತ್ರಿಸುವ ತಂತ್ರ ಚಮತ್ಕೃತಿಯಾಗಿದೆ'' ಎಂದಿದ್ದಾರೆ.

ಎಲ್. ಎಸ್. ಶೇಷಗಿರಿರಾವ್ ಅವರು ಮೂರು ಕಾದಂಬರಿಯ ಒಳನೋಟಗಳನ್ನು ಗುರುತಿಸಿದ್ದಾರೆ. '' ಉದ್ಭವಿಸಿದ ಒಂದು ಪ್ರಶ್ನೆಯನ್ನು ಬಿಡಿಸಲು ಮೂರು ವ್ಯಕ್ತಿಗಳು ಕಂಡುಕೊಂಡ ದಾರಿಗಳು. ಇವು ಇವರು ಬದುಕನ್ನು ಇದಿರಿಸುವ ರೀತಿಗಳೂ ಹೌದು. ಭೀತಿ, ಪ್ರೀತಿ, ಬಂಡಾಯ (ಆತ್ಮನಾಶ) ಇವುಗಳ ಸೆಲೆ. ಇವರ ವ್ಯಕ್ತಿತ್ವದ ಗರ್ಭದಲ್ಲಿ ಇದೊಂದು ಶ್ರೀಮಂತ ಕೃತಿ. ನಮ್ಮಲ್ಲಿ ವಾಸ್ತವಿಕತೆ ಎನ್ನುವ ಪದವನ್ನು ಬಳಸುವುದಕ್ಕೆ ಹೆದರಿಕೆಯಾಗುತ್ತದೆ. ಆ ಪದಕ್ಕೆ ಅಷ್ಟೊಂದು ಹಿಂಸೆ ಕೊಟ್ಟಾಗಿದೆ. ಆದರೆ ಮೂರು ದಾರಿಗಳು ವಾಸ್ತವಿಕತೆಯಲ್ಲ. ಅನುಭವ-ಅದನ್ನೆ ಬೇಕಾದರೆ ದರ್ಶನ ಎನ್ನೋಣ-ವಾಸ್ತವಿಕತೆ. ಹೊರಗಣ್ಣಿಗೆ ತೋರುವ ಬಾಳಿನ ಹಿಂದೆ ಕಾದಂಬರಿಕಾರ ತನ್ನ ಕಲ್ಪನೆಯ ಕಣ್ಣಿನಿಂದ ಕಂಡ ವಾಸ್ತವಿಕತೆ. ಈ ವಾಸ್ತವಿಕತೆಯ ವೈಶಿಷ್ಟ್ಯವೆಂದರೆ ಹೊರಜಗತ್ತು-ಒಳಗಿನ ಚೇತನ ಇವುಗಳ ಸಂಬಂಧದ ನಿರೂಪಣೆ-ನಿರ್ಮಲ, ವಾಸುದೇವ, ರಾಮನಾಥ- ಇಂತಹ ಪಾತ್ರಗಳು ನಮ್ಮ ಮುಂದೇ ರೂಪತಾಳುವುದನ್ನು ನಾವು ಕಾಣುತ್ತೇವೆ ಎನ್ನಿಸುತ್ತದೆ. ಪಾತ್ರದ ಪ್ರತಿಕ್ರಿಯೆಯಿಂದ ಘಟನೆ ರೂಪಿತವಾಗುತ್ತದೆ. ಘಟನೆಯಿಂದ ಪಾತ್ರ ರೂಪಿತವಾಗುತ್ತದೆ. ಪ್ರವಾಹ-ದಡಗಳ ಸಂಬಂಧದಂತಹ ಸಮೀಪವಾದ, ಪ್ರಭಾವಯುತವಾದ ಸಂಬಂಧ ಇಲ್ಲಿ ಪಾತ್ರ ಘಟನೆಗಳದು. ಅಲ್ಲದೇ ಇಲ್ಲಿಯ ಪಾತ್ರ ನಿರೂಪಣೆಯ ಗುರಿ ಆಗಲೇ ಅಚ್ಚಿನಲ್ಲಿ ಎರಕ ಹೊಯ್ದಂತೆ ಸಿದ್ಧವಾಗಿ ನಿರ್ದಿಷ್ಟವಾಗಿರುವ ಸ್ವಭಾವಕ್ಕೆ ಹಲವು ಕಡೆಗಳಿಂದ ಬೆಳಕನ್ನು ಬಿಡುವುದಿಲ್ಲ. ಅತ್ತಿತ್ತ ಹೊರಳುತ್ತ ನಿಲ್ಲುತ್ತ, ಸುತ್ತುತ್ತ, ಒಮ್ಮೆ ಉತ್ಸಾಹದಿಂದ ಪುಟಿದೇಳುತ್ತ ಮತ್ತೊಮ್ಮೆ ಶಕ್ತಿಯಡಗುತ್ತ ಅಂತೂ ನಿಲ್ಲಲಾರದೆ ಮುಂಟೆ ಸಾಗಲೇಬೇಕಾದ, ಸಾಗುವ ಒಂದು ಪ್ರವಾಹದ ಚಿತ್ರ ಒಂದೊಂದು ಪಾತ್ರವೂ. ಒಮ್ಮೆ ನಾವು ಪಾತ್ರವನ್ನು ಒಳಹೊಕ್ಕು ಅದರಲ್ಲಿ ಒಂದಾಗುತ್ತೇವೆ. ಒಮ್ಮೆ ಅದರ ಸುತ್ತಲಿನ ನೂರು ಸರ್ಚಲೈಟ್ ಕಣ್ಣುಗಳ ಬೆಳಕಿನಲ್ಲಿ ಅದನ್ನು ಕಾಣುತ್ತೇವೆ. ಮತ್ತೊಮ್ಮೆ ಪಾತ್ರದಿಂದ, ಅದರ ಜಗತ್ತಿನಿಂದ ದೂರನಿಂತು ನೋಡುತ್ತೇವೆ. ಈ ಜಗತ್ತನ್ನು ಸೃಷ್ಟಿಸುವ ಮನೋಭಾವದ ಮೂಲಸ್ಫೂರ್ತಿ ಅನುಕಂಪ, ಆಳವಾದ ಮೇರೆಯಿಲ್ಲದ ಅನುಕಂಪ. ಮೂರು ದಾರಿಗಳನ್ನು ಚಿತ್ರಿಸಲು ನಡೆಯುವ ಘಟನೆಗಳನ್ನು ಬೇರೆ ಬೇರೆ ದೃಷ್ಟಿಯಿಂದ

ಕಂಡು ಅವುಗಳ ಅರ್ಥವನ್ನು ಅರಿವು ಮಾಡಿಕೊಳ್ಳುವಂತೆ ಕಾದಂಬರಿಕಾರರು ಬಳಸುವ ತಂತ್ರ ಅವರ ವಸ್ತು ಮತ್ತು ಗುರಿಗಳಿಗೆ ತೀರ ಸಹಜವಾಗಿದೆ. ತಂತ್ರದ ನಾವೀನ್ಯತೆ, ಭಾಷೆಯ ಪ್ರಯೋಗಗಳು ಇವು ಕಣ್ಣುಕುಕ್ಕದೆ ಹಿಂದುಳಿದು, ಕಾದಂಬರಿಕಾರ ತನ್ನ ಗುರಿಯನ್ನು ಸಾಧಿಸುವಂತಾಗಿದೆ''.

''ಪಾತ್ರಗಳ ಅಂತರಂಗದ ಸೂಕ್ಷ್ಮಚಿತ್ರಣ, ಚಿತ್ರಕೃತಿಯಂತೆ ಕೃತಿ ಪಡೆದಿರುವ ಆಕಾರ, ಇಡೀ ಊರಿನ ಉಸಿರಾಟವನ್ನು ಕೂಡ ಕಿವಿಗೆ ಕೇಳಿಸುವಂತೆ ಮಾಡಬಲ್ಲ ವಾಸ್ತವಿಕತೆ, ಜೀವನದ ಗಂಭೀರ ನಿಲುವು ಇವೆಲ್ಲ ಒಂದು ಮೇಲುಮಟ್ಟದ ಕಲಾಪ್ರಜ್ಞೆಗೆ ಸಾಕ್ಷಿಯಾಗಿವೆ'' ಎಂದು ಕೀರ್ತಿನಾಥ ಕುರ್ತಕೋಟಿಯವರು ಕಾದಂಬರಿಯ ಬಗೆಗೆ ಹೇಳಿದ್ದಾರೆ. ಚಿತ್ತಾಲರ ಕಥನ ಪ್ರತಿಭೆಯನ್ನು ಎಚ್. ಎಸ್. ರಾಘವೇಂದ್ರರಾವ್ ಅವರು ಈ ಕಾದಂಬರಿಯ ಮೂಲಕ ಗುರುತಿಸಿದ್ದಾರೆ. ಜಿ. ಎಸ್. ಆಮೂರ ಅವರು ಲೇಖಕರ ಕಲಾವಂತಿಕೆಯ ಬಗೆಗೆ ಹೇಳುತ್ತಾ ''Chittal reveals a wonderfull ability, as an artist to identify himself with all his central charactors. In spite of their wide divergencee in personality and attitude....'' ಎಂದು ಅಭಿಪ್ರಾಯಪಟ್ಟಿದ್ದಾರೆ.

ಚಿತ್ತಾಲರ 'ಶಿಕಾರಿ' ಕಾದಂಬರಿಯು ಹೆಚ್ಚು ಚರ್ಚೆಗೆ ಗ್ರಾಸವಾಗಿದೆ. ಕನ್ನಡದ ಹತ್ತು ಅತ್ಯುತ್ತಮ ಕಾದಂಬರಿಗಳಲ್ಲಿ ಒಂದಾದ 'ಶಿಕಾರಿ'ಯ ಬಗೆಗೆ ವಿಭಿನ್ನ ನೆಲೆಗಳಿಂದ ಅಧ್ಯಯನ ಮಾಡಲಾಗಿದೆ. ಡಾ. ಎಚ್. ಎಸ್. ರಾಘವೇಂದ್ರರಾವ್ ಅವರು ಇದರ ವಸ್ತುವನ್ನು ಕುರಿತಂತೆ ವಿವರಣಾತ್ಮಕವಾಗಿ ವಿಮರ್ಶೆಯನ್ನು ಮಾಡುತ್ತ ''ವ್ಯಕ್ತಿಯ ಅಂತರಂಗದ ಸಮಸ್ಯೆಗಳ ಮತ್ತು ಕೊರತೆಗಳ ಅನ್ವೇಷಣೆಯ ಕಡೆಗೆ ತಿರುಗಿದ ನವ್ಯಸಾಹಿತ್ಯ ಮತ್ತು ವ್ಯಕ್ತಿಯ ಎಲ್ಲ ಸಮಸ್ಯೆಗಳ ಬೇರನ್ನು ಅವನ ಸಾಮಾಜಿಕ ಜೀವನದ ವಿಷಮತೆಗಳಲ್ಲೇ ಕಾಣುವ ಬಂಡಾಯ ಸಾಹಿತ್ಯಗಳೆರಡೂ ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಚಲಿಸಬಹುದಾದ ಅಪಾಯವನ್ನು ಶಿಕಾರಿಯಂತಹ ಕೃತಿಗಳು ಕಡಿಮೆ ಮಾಡುತ್ತವೆ. ಏಕೆಂದರೆ ಸಮಾಜದ ಆರೋಗ್ಯವು ಕೆಡುವುದರ ಕಾರಣವನ್ನು ಹುಡುಕುತ್ತಾ ನಡೆಸುವ ಶೋಧನೆಯೂ ಕೂಡ ಯಂತ್ರಯುಗದ ಪ್ರಭಾವಗಳಿಂದ ಅಸ್ತವ್ಯಸ್ತವಾಗಿರುವ ವೈಯಕ್ತಿಕ ಮೌಲ್ಯಗಳ ಜಗತ್ತಿನ ಕಡೆಗೆ ನಮ್ಮನ್ನು ಕರೆದುಕೊಂಡು ಹೋಗುತ್ತದೆ. ಆದ್ದರಿಂದಲೇ ವ್ಯಕ್ತಿ ಜೀವನ ಮತ್ತು ಸಮಾಜ ಜೀವನಗಳ ನಡುವಿನ ಸಂಕೀರ್ಣ ಸಂಬಂಧಗಳ ಉದ್ವೇಗರಹಿತ ವಿಶ್ಲೇಷಣೆ ಮಾತ್ರ ಪರಿಹಾರದ ಕಡೆಗೆ ಕರೆದೊಯ್ಯಬಲ್ಲದು. ಕೆಲವು ಕಡೆ ಆತ್ಮರತವೆನ್ನಿಸುವ ನವ್ಯ ಮತ್ತು ನಿರ್ಭೀಡೆಯಾಗಿ ವೈಯಕ್ತಿಕತೆಯನ್ನು ಸಾಮಾಜಿಕ ಅಸ್ತಿತ್ವಕ್ಕೆ ಅಡಿಯಾಳಾಗಿ ಮಾಡುವ ಬಂಡಾಯಗಳ ನಡುವೆ ಅಪೇಕ್ಷಣೀಯವಾದ ಸಮತೋಲನವನ್ನು ತರಲು ಶಿಕಾರಿ ಪ್ರಯತ್ನಿಸುತ್ತದೆ'' ಎಂದು ವ್ಯಾಖ್ಯಾನಿಸಿದ್ದಾರೆ.

ಶಿಕಾರಿ ಕಾದಂಬರಿಯ ಮಹತ್ವವನ್ನು ಎನ್. ರಂಗನಾಥರಾವ್ ಈ ಕೆಳಗಿನ ಕಾರಣಗಳಿಗಾಗಿ ಗುರುತಿಸಿದ್ದಾರೆ: ''ಪ್ರೀತಿ, ಅಂತಃಕರಣ, ಸ್ವಾತಂತ್ರ್ಯ ಮೊದಲಾದ

ಮಾನವೀಯ ಮೌಲ್ಯಗಳಿಗೆ ಕವಡೆ ಬೆಲೆಯನ್ನು ಕೊಡದೆ, ಜಾತಿ ಮೊದಲಾದ ಎಲ್ಲ ವ್ಯವಸ್ಥೆಗಳಲ್ಲೂ ಕಾರ್ಯಪ್ರವೃತ್ತವಾಗಿರುವ ಫ್ಯಾಶಿಸ್ಟ ಶಕ್ತಿಗಳು ಒಂದು ಕಡೆ ಕಂಡು ಬರುತ್ತಿರುವ ಇಂದಿನ ಸಂದರ್ಭದಲ್ಲಿ ಈ ಎಲ್ಲ ವ್ಯವಸ್ಥೆಯ ಮೂಲದಲ್ಲಿರುವ ಮನುಷ್ಯನ ಸ್ವಾರ್ಥ, ಅಹಂಗಳನ್ನೂ ಕ್ರೌರ್ಯಗಳನ್ನೂ ಇವುಗಳನ್ನೂ ಮೀರಿ ಬೆಳೆಯಬೇಕಾದ ಅಗತ್ಯವನ್ನು ತೋರಿಸುವ ಕಾರಣಕ್ಕಾಗಿ ಶಿಕಾರಿ ಗಮನಾರ್ಹ ಕಾದಂಬರಿಯಾಗಿದೆ''.

ಕಾದಂಬರಿಯ ಐದನೆಯ ಭಾಗವನ್ನು ಕುರಿತು ಕುಮಾರ ಜೋಶಿಯವರು ವಿಮರ್ಶಿಸುತ್ತಾ ''ಇಡಿಯ ಕಾಗಂಬರಿಯಲ್ಲಿ ಐದನೆಯ ಭಾಗ ತುಂಬ ಗಟ್ಟಿಯಾದ ಮತ್ತು ಕಲಾತ್ಮಕವಾದ ಭಾಗ. ಹದಿಮೂರು ದಿನಗಳ ನಾಗಪ್ಪನ ಮಾನಸಿಕ ವನವಾಸ ಯಾತನೆಯ ನಂತರದ ತನಿಖೆಯ ಹಂತ ಈ ಭಾಗದಲ್ಲಿ ಅಚ್ಚುಕಟ್ಟಾಗಿ ವಿವರಿಸಲ್ಪಟ್ಟಿದೆ. ಚಿತ್ತಾಲತನದ craftsmanship ಉತ್ತುಂಗಕ್ಕೆ ಏರಿದೆ ಅನ್ನುತ್ತೇನೆ ನಾನು. ಇದರಲ್ಲಿ ಅಧ್ಯಾಯಗಳಿಲ್ಲ, ತನಿಖೆಯ ಆರಂಭದಿಂದ ಹಿಡಿದು, ನಾಗಪ್ಪನ ಸಂಪೂರ್ಣ ಸೋಲಿನವರೆಗೆ ಕಥೆ ಬೆಳೆಯುತ್ತದೆ. ಸಂಪೂರ್ಣ ಸೋಲು ಅಂತ ಯಾಕನ್ನುತ್ತೇನೆಂದರೆ ಎಲ್ಲವನ್ನು ಎದುರಿಸಲು ಸಿದ್ಧನಾಗಿಯೇ ಬಂದು, ಎದುರಾಳಿಗಳನ್ನೆಲ್ಲ ನಗ್ನಗೊಳಿಸುವ ಹಠತೊಟ್ಟು, ಕೊನೆಗೆ ತನ್ನ ಬಗ್ಗೇ, ಈ ಎಲ್ಲದರ ಬಗ್ಗೇ ಹೇಸಿಗೆಪಟ್ಟು ರಾಜೀನಾಮೆ ಕೊಡುವ ಸ್ಥಿತಿಗೆ ನಾಗಪ್ಪ ಇಳಿಯುತ್ತಾನೆ. ಸುಳ್ಳು ಸಂಬಂಧಗಳನ್ನೆಲ್ಲ ಕಡಿದುಕೊಳ್ಳುವ ಕ್ರಿಯೆಯ ಹಾದಿಯಲ್ಲಿ ಗೆಲ್ಲುತ್ತಿದ್ದೇನೆ ಅಂದುಕೊಳ್ಳುತ್ತ ಧೂರ್ತ ಸ್ಕೈ ಸ್ಕ್ರೇಪರ್ ಜಗತ್ತಿನೊಂದಿಗಿನ ಮುಖಾಮುಖಿಯಲ್ಲಿ ಸೋತು ಹೆಗ್ಗಣವಾಗಿ, ಒಳಗಿನದೆಲ್ಲ ವಾಂತಿ-ಮಾಡಿಕೊಂಡು ತಾಜಮಹಲ್ ಹೋಟೆಲ್ ಬಿಡುತ್ತಾನೆ. ನಾಗಪ್ಪನ ಮತ್ತು ಪದ್ಮಕ್ಕನ ಮುಖಾಮುಖಿಯ ಸಂದರ್ಭದಷ್ಟೇ ಅಥವಾ ನನಗನಿಸುವಂತೆ ಇನ್ನೂ ಸಾಂದ್ರವಾದ, ನಾಗಪ್ಪ ಮತ್ತು ತನಿಖಾ ಆಯೋಗದ ಮುಖಾಮುಖಿಯೇ ಹೆಚ್ಚು ಮುಖ್ಯವಾಗುತ್ತದೆ. ತಾಜ್‌ಮಹಲ್ ಹೋಟೆಲ್‌ನಿಂದ ಹೊರಬಿದ್ದು ನಡೆಯುವ ನಾಗಪ್ಪನ ಮನಸ್ಸಿನೊಳಗಿನ ಗಡಚಿಕ್ಕುವ ಮೌನ ಬಹಳವಾಗಿ ಕಾಡುತ್ತದೆ. ತನಿಖೆಯು ಸಂಪೂರ್ಣ ಚಿತ್ರಣ ಪರಿಣಾಮಕಾರಿಯಾಗಿ ಬಂದಿದೆ'' ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.

ಶಿಕಾರಿ ಕಾದಂಬರಿಯ ಪ್ರಸ್ತುತತೆಯನ್ನು ವಿವರಿಸುತ್ತಾ ಜಿ. ಎಸ್. ಆಮೂರರು ''ಕನ್ನಡದ ಮಟ್ಟಿಗೆ ತೀರ ಹೊಸ ವಸ್ತುವನ್ನು ಆಯ್ದುಕೊಂಡ ಚಿತ್ತಾಲರು ಅದನ್ನು ಬಹುಸಮರ್ಥವಾಗಿ ನಿರ್ವಹಿಸಿದ್ದಾರೆ. ನಾಗಪ್ಪನ ಮನಸ್ಸಿನ ಒಳಪದರುಗಳನ್ನು ಬಿಚ್ಚಿ ತೋರಿಸುವಲ್ಲಿ, ಅವನು ಎದುರಿಸಬೇಕಾದ ತನಿಖೆಯಂಥ ನಾಟ್ಯಮಯ ಸನ್ನಿವೇಶಗಳನ್ನು ತೆರೆಯುವಲ್ಲಿ, ಕಾದಂಬರಿಯಲ್ಲಿ ಬರುವ ಅನೇಕ ವ್ಯಕ್ತಿಗಳ ಬಹಿರಂಗ ಅಂತರಂಗಗಳ ದರ್ಶನದಲ್ಲಿ, ನೆನಪುಗಳಿಗೆ ಮೂರ್ತರೂಪಕೊಟ್ಟು ವರ್ತಮಾನಕ್ಕೆ ತರುವಲ್ಲಿ, ಚಿತ್ತಾಲರ ಪ್ರತಿಭೆ ಅದ್ಭುತವಾಗಿ ದುಡಿದಿದೆ''.

ಸಮಕಾಲೀನ ಕಾದಂಬರಿಗಳಲ್ಲಿ ಶಿಕಾರಿಯ ವಿಭಿನ್ನತೆಯನ್ನು ಡಾ. ಕೆ. ವಿ. ನಾರಾಯಣ ಅವರು ಗುರುತಿಸಿದ್ದಾರೆ. ಅವರು ಕೊಡುವ ಅಂಶಗಳು ಹೀಗಿವೆ: ''ತಾನು ಕಾರಣವಲ್ಲದ ಅಪರಾಧವೊಂದರ ಹೊಣೆಯನ್ನು ಹೊರಿಸಿ ಅವನನ್ನು ಕೆಲಸದಿಂದ ಅನಾಮತ್ತಾಗಿ ಹೊರಗಿಡುವುದರಿಂದ ಅವನ ಒಳಗಿನ ಜಗತ್ತು ಸ್ಫೋಟಗೊಂಡು ಹೊರಬರಲು ಚಾಲನೆ ಸಿಗುತ್ತದೆ. ಇದು ತಂತ್ರದೃಷ್ಟಿಯಿಂದ ಫ್ರಾಂಜ್ ಕಾಫ್ಕನ 'ದಿ ಟ್ರಯಲ್' ಕಾದಂಬರಿಯ ನೆನಪನ್ನು ತರುತ್ತದೆ. ಹೀಗೆ ನಾಗಪ್ಪ ನಿತ್ಯದ ಕಟ್ಟೋಟದಿಂದ ಹೊರಬಂದು ಕ್ರಿಯಾಶೀಲತೆಯ ನೆಲೆಗಳನ್ನು ಕಾಣಲು ಯತ್ನಿಸುತ್ತಾ ಹೋಗುತ್ತಾನೆ. ಇಲ್ಲಿ ತನ್ನದಲ್ಲದ ಅಪರಾಧದ ಹೊಣೆ ಅವನ ಬೆನ್ನ ಮೇಲಿದೆ. ಜತೆಗೆ ಅವನ ಆಯ್ಕೆಯನ್ನು ಮೀರಿದ ಅವನ ಚಿಕ್ಕಂದಿನ ಪರಿಸರ ಕೂಡ ಅವನ ಬೆನ್ನ ಮೇಲಿದೆ. ಚಿಕ್ಕಂದಿನ ಪರಿಸರದ ಪ್ರಭಾವ ತನ್ನ ವ್ಯಕ್ತಿತ್ವದೊಡನೆ ಹಾಕಿಕೊಂಡಿರುವ ಹೆಣಿಗೆಯನ್ನು ಆತ ಅಚ್ಚರಿಯಿಂದ, ನೋವಿನಿಂದ ನೋಡುವಾಗಲೇ ಅವನನ್ನು ಮೀರಿ ಅದು ಬೇರೊಂದು ಅರ್ಥವನ್ನು ಪಡೆಯುತ್ತಾ ಇರುತ್ತದೆ. ಚಿಕ್ಕಂದಿನ ಬೆಂಕಿಯ ಅಪಘಾತದ ಪ್ರಭಾವವೇ ಅವನಲ್ಲಿಯ ಬೆಂಕಿಯ ಬಗ್ಗೆ ಹೆದರಿಕೆಯನ್ನು ಮೂಡಿಸಿದ್ದು, ಅದೇ ಅವನನ್ನು ಅಪರಾಧಕ್ಕೆ ಪ್ರೇರಣೆಯನ್ನು ನೀಡಿದೆಯೆಂದು ಅವನ ಶಿಕಾರಿಗಳು ತರ್ಕಿಸಿ ತಮ್ಮ ಹುಕುಮಿನ ಎಲೆಯನ್ನು ಎಸೆಯುತ್ತಾರೆ. ನಾಗಪ್ಪನನ್ನು ನಿರಸ್ತ್ರನನ್ನಾಗಿ ಮಾಡುತ್ತಾರೆ. ಮತ್ತೊಂದು ನಾಗಪ್ಪನ ಹುಟ್ಟು ಮತ್ತು ಅವನ ಕ್ರಿಯಾಶೀಲತೆಯ ನಡುವೆ ಸಂಬಂಧ ಕಲ್ಪಿಸುತ್ತಿದ್ದ ಸಾಹಿತ್ಯಕ ವಲಯ ಸುಳ್ಳು ಕಾರಣಗಳನ್ನು ಹೊಂದಿರುವುದು ಬಯಲಾಗುತ್ತದೆ. ಹೀಗೆ ನಾಯಕನ ಬಾಲ್ಯದ ಪ್ರಭಾವಗಳು ಕಾದಂಬರಿಯಲ್ಲಿ ಅವನ ಆಚೆಗೆ ಭಿನ್ನನೆಲೆಗಳಲ್ಲಿ ಬಳಕೆಯಾಗಿರುವುದು ಕೃತಿಯ ವ್ಯಂಗ್ಯವಾಗಿದೆ. ಆದರೆ ಕಾದಂಬರಿ ಒಂದು ಹೆಜ್ಜೆ ಮುಂದುವರಿದು ನಾಗಪ್ಪನನ್ನು ಈ ಆಟದಿಂದ ಹೊರಗೆ ತಂದು ನಿಲ್ಲಿಸುತ್ತದೆ. ಆತ ತಾನು ಬಲಿಯಾಗಲು ಸಿದ್ಧನಾಗಿ ರಾಜಿ ಮಾಡಿಕೊಳ್ಳದೇ ಬದುಕನ್ನು ತಾನೇ ಎದುರಿಸಲು ಹೊರಡುತ್ತಾನೆ. ಇದು ಅವನ ಯಶಸ್ಸಿನ ಘೋಷಣೆಯಾಗಿದೆ. ಸಮಕಾಲೀನವಾದ ಇತರ ಕೆಲವು ಕಾದಂಬರಿಗಳಿಗಿಂತ ಶಿಕಾರಿ ಬೇರೆಯಾಗಿರುವುದು ಇಲ್ಲಿ''.

ಡಾ. ರಹಮತ್ ತರೀಕೆರೆಯವರು ಈ ಕಾದಂಬರಿಯಲ್ಲಿನ ಪಾತ್ರಗಳನ್ನು ವಿಶ್ಲೇಷಿಸುತ್ತಾ ''ಇಲ್ಲಿನ ಕೆಲವು ಪಾತ್ರಗಳ ವಿಚಿತ್ರವೆನಿಸುವ ವರ್ತನೆಗಳಿಗೆ ನಾವು ಕಾರಣ ಹುಡುಕುವ ಅವಶ್ಯಕತೆಯನ್ನೇ ಉಳಿಸುವುದಿಲ್ಲ. ಅದರಲ್ಲೂ ನಾಗಪ್ಪನ ಪಾತ್ರ ಬಂದಾಗ, ಲೇಖಕರೇ ಮಧ್ಯೆ ಪ್ರವೇಶಿಸಿ ಅವನ ಮನಸ್ಸನ್ನು ಸವಿವರವಾಗಿ ವಿಶ್ಲೇಷಿಸಿ ವಿವರಿಸುತ್ತಾರೆ. ಅಥವಾ ನಾಗಪ್ಪನನ್ನೇ ಯೋಚನೆ ಮಾಡಲು ಹಚ್ಚಿ ಅವನ ಸ್ವಗತಗಳಲ್ಲಿ ಅದು ಹೊರಬರುವಂತೆ ಮಾಡುತ್ತಾರೆ'' ಎಂದಿದ್ದಾರೆ. ಇನ್ನೂ ಮುಂದುವರೆದು ''ತಮ್ಮ ಸಣ್ಣಕಥೆಗಳ ಮೂಲಕ ವಿಶಿಷ್ಟವಾಗಿ ನಿಂತಿದ್ದ ಚಿತ್ತಾಲರು ಕಾದಂಬರಿಯಲ್ಲೂ ಹೊಸದಿಕ್ಕೊಂದನ್ನು ಅಪ್ಪಿಕೊಂಡು, ಭಿನ್ನವಾದ ಆಯಾಮವನ್ನು ಸೃಷ್ಟಿಸಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಹೊಸತೇ ಆದ ಅನುಭವ ಜಗತ್ತೊಂದನ್ನು ತೆರೆಯುವ ಮೂಲಕ ತಮ್ಮ

ಶಕ್ತಿಯ ಮತ್ತೊಂದು ಮುಖವನ್ನು ಪರಿಚಯಿಸಿದ್ದಾರೆ ಎಂಬುದು ನಿರ್ವಿವಾದ ಸಂಗತಿ'' ಎಂದು ಲೇಖಕರನ್ನು ಕುರಿತು ಹೇಳಿದ್ದಾರೆ.

ಟಿ. ಪಿ. ಅಶೋಕ ಅವರು ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಫ್ರಾಂಜ ಕಾಫ್ಕಾ ಅವರ ಕಾದಂಬರಿಗಳೊಡನೆ ಚಿತ್ತಾಲರ ಕಾದಂಬರಿಗಳನ್ನು ತೌಲನಿಕವಾಗಿ ಲೇಖನವೊಂದರಲ್ಲಿ ವಿವೇಚಿಸಿದ್ದಾರೆ. ಅಲ್ಲಿ ಶಿಕಾರಿಯ ಭಿನ್ನತೆಯನ್ನು ಗುರುತಿಸಿದ್ದಾರೆ.

ಚಿತ್ತಾಲರ ಮೂರನೆಯ ಕಾದಂಬರಿಯಾದ 'ಭೇದ' ದ ಬಗ್ಗೆ ಎಚ್. ಎಸ್. ರಾಘವೇಂದ್ರರಾವ್ ಮತ್ತು ಟಿ. ಪಿ. ಅಶೋಕ ಅವರು ಗ್ರಹಿಸಿದ ಬಗೆಯನ್ನು ನೋಡಿದರೆ ಚಿತ್ತಾಲರ ಸೃಜನಶೀಲ ಬದುಕಿನ ಮುಂದುವರೆದ ಹಂತವನ್ನು ಕಾಣುತ್ತೇವೆ. ಎಚ್.ಎಸ್. ರಾಘವೇಂದ್ರರಾವ್ ಅವರು ವಿಮರ್ಶಿಸುತ್ತಾ ''ಭೇದದ ಹರಹು ಶಿಕಾರಿಯಷ್ಟು ದೊಡ್ಡದಲ್ಲವಾದರೂ ಅದರಲ್ಲಿ ಚಿತ್ತಾಲರ ಜೀವನಗ್ರಹಿಕೆಗಳ ಮುಂದಿನ ಹಂತವಿದೆ. ಈ ನಿರಂತರವಾದ ಬೆಳವಣಿಗೆ ಚಿತ್ತಾಲರ ಕಥಾಸಾಹಿತ್ಯದ ಪ್ರಮುಖ ಲಕ್ಷಣ. ಕೆಲವೊಮ್ಮೆ ನಿರೂಪಣಾ ವಿಧಾನದ ಏಕತಾನತೆಯಿಂದ ಮಸಕಾಗಿಬಿಡುವ ಈ ಬೆಳವಣಿಗೆಯನ್ನು ಗುರುತಿಸಲು ಅವಧಾನ ಅಗತ್ಯ. ತನ್ನನ್ನು ಬಿಟ್ಟು ಉಳಿದೆಲ್ಲರನ್ನೂ ಸಂಶಯದ ಕಣ್ಣುಗಳಿಂದಲೇ ನೋಡಬೇಕಾಗಿ ಬರುವ ಶಿಕಾರಿಯ ಸ್ಪರ್ಧಾತ್ಮಕ ಜಗತ್ತಿನಿಂದ ಉಳಿದವರೂ ತನ್ನಂತೆಯೇ 'ಬಲಿ'ಯಾದವರಿರಬಹುದೆಂದು ಗ್ರಹಿಸುವ ಪರಿಪಕ್ವತೆ ಭೇದದ ಹಲವು ಪಾತ್ರಗಳಲ್ಲಿ ಕಂಡು ಬರುತ್ತದೆ. ಈ ತಿಳುವಳಿಕೆಯ ಫಲವಾದ ಪರಸ್ಪರ ಪ್ರೀತಿಯ ಅನಿವಾರ್ಯತೆ ಸಿದ್ಧಾರ್ಥ, ಪುರುಷೋತ್ತಮಗಳಲ್ಲಿ ಸುವ್ಯಕ್ತವಾಗಿದೆ. ಈ ಅರ್ಥದಲ್ಲಿ 'ಭೇದ'ವು ಉಳಿದೆರಡು ಕಾದಂಬರಿಗಳ ನಡುವಿನ ಮಹತ್ವದ ಕೊಂಡಿಯಾಗಿದೆ. ''ಅಲ್ಲದೇ'' ನಾವು ಬದುಕಿರುವ ಸಮಾಜದಲ್ಲಿರುವ, ನಮ್ಮ ಉಸಿರು ಕಟ್ಟಿಸುತ್ತಿದ್ದರೂ ನಮಗೇ ನಿಗೂಢವಾಗಿ ಉಳಿದಿರುವ ಹಲವು ಸತ್ಯಗಳನ್ನು ಈ ಕಾದಂಬರಿ ಇನ್ನಿಲ್ಲವೆನ್ನುವಷ್ಟು ಚೆನ್ನಾಗಿ ಮೂಡಿಸುತ್ತದೆ. ತಾನು ಯಾವ ತಲ್ಲಣ ತುಂಬಿದ ಜೀವನ ಸ್ಥಿತಿಗಳ ಬಗ್ಗೆ ಹೇಳುತ್ತಿದೆಯೋ ಅಂಥದೇ ತಲ್ಲಣ ತುಂಬಿದ ಮನಃಸ್ಥಿತಿಯನ್ನು ಓದುಗನಲ್ಲಿ ಉಂಟುಮಾಡಲು ಸಮರ್ಥವಾದ ಶಿಲ್ಪವನ್ನು ಚಿತ್ತಾಲರು ಇಲ್ಲಿ ಕಂಡುಕೊಂಡಿದ್ದಾರೆ. ಇಂಥ ಕೃತಿಗಳನ್ನು relaxed ಆಗಿ, ರೋಚಕವಾದ ಅನುಭವಗಳಿಗೆ ಒಡ್ಡಿಕೊಂಡು ಓದಲು ಸಾಧ್ಯವಿಲ್ಲ. ಇಂಥ ಕೃತಿಗಳು ತಾವು ಹುಟ್ಟಿಸಿದ ವ್ಯಗ್ರತೆಯನ್ನು ಕ್ರಮೇಣ ತಾವೇ ನಿರಾಳವಾಗಿಸುವ ಕೆಲಸಮಾಡುತ್ತವೆ (ಪುರುಷೋತ್ತಮ, ಸಿದ್ಧಾರ್ಥಗಳಂತೆ). ಅಂಥ ನಿರಾಳ ಅನಗತ್ಯವೆನಿಸಿದರೆ ಬಿಗಿ ಸಡಿಲದ ಸ್ಥಿತಿಯಲ್ಲೇ ಕೃತಿ ಮುಕ್ತಾಯವಾಗುತ್ತದೆ (ಭೇದ, ಶಿಕಾರಿಗಳಂತೆ)'' ಎಂಬುದಾಗಿಯೂ ಹೇಳಿದ್ದಾರೆ.

ಟಿ. ಪಿ. ಅಶೋಕ ಅವರೂ ಸಹ ರಾಘವೇಂದ್ರರಾವ್ ಅವರ ಹೇಳಿಕೆಯನ್ನು ಅನುಮೋದಿಸಿದಂತೆ ಕಂಡುಬರುತ್ತವೆ: ''ಭೇದ ಚಿತ್ತಾಲರ ಕಾದಂಬರಿಗಳ ಸಂದರ್ಭದಲ್ಲಿ ಮಾತ್ರವಲ್ಲ, ಒಟ್ಟು ಅವರ ಸೃಜನಶೀಲ ಬದುಕಿನ ಸಂದರ್ಭದಲ್ಲಿ ಒಂದು ಅರ್ಥಪೂರ್ಣ ಮುಂದುವರೆದ ಘಟ್ಟವನ್ನು ಸಾಂಕೇತಿಸುತ್ತದೆ. ಇಲ್ಲಿ ಬರುವ ಪಾತ್ರಗಳ ಕಥೆ ಬರೆಯುವ ಇಲ್ಲವೆ ಕಥೆ ಹೇಳುವ ಅಭಿವ್ಯಕ್ತಿಯ ಒಂದು ವಿಶಿಷ್ಟ ಕ್ರಮದ

ಸೌಂದರ್ಯಾತ್ಮಕ ಪ್ರಶ್ನೆಗಳನ್ನೇನೂ ಎದುರಿಸುವುದಿಲ್ಲ. ಯಾವುದೋ ಸಂದರ್ಭದಲ್ಲಿ ಮುಖಾಮುಖಿಯಾಗುವ ಇವರು ತಾವು ಯಾವುದೇ ರಹಸ್ಯದ ಬೆನ್ನಟ್ಟಿ ಹೋಗುತ್ತಿದ್ದವೆಂದು ಅಂದುಕೊಳ್ಳುತ್ತಿರುವ ಪರಿಕ್ರಮದಲ್ಲೇ ಇತರರನ್ನು ಅರ್ಥಮಾಡಿಕೊಳ್ಳುವ, ಇತರರಿಗೆ ಅರ್ಥಮಾಡಿಸುವ ಪ್ರಾಥಮಿಕ ಹಂತದಲ್ಲೇ ಎಡವಿ ಬೀಳುತ್ತಿರುವುದನ್ನು ಗ್ರಹಿಸುತ್ತಾ ಹೋಗುತ್ತಾರೆ.''

'ಪುರುಷೋತ್ತಮ' ಚಿತ್ತಾಲರ ಬೃಹತ್ ಕಾದಂಬರಿ. ಗಿರಡ್ಡಿ ಗೋವಿಂದರಾಜ ಅವರು ಇದರ ವೈಶಿಷ್ಟ್ಯತೆಯ ಬಗೆಗೆ ಹೀಗೆ ಹೇಳಿದ್ದಾರೆ: ''ಭೇದ ಕಾದಂಬರಿಯಲ್ಲಿ ನಿರಾಶೆಯನ್ನುಂಟುಮಾಡಿದ್ದ ಚಿತ್ತಾಲರು ಪುರುಷೋತ್ತಮದಲ್ಲಿ ಮತ್ತೆ ಶಿಕಾರಿಯಿಂದ ಮುಂದುವರಿದ ಬೆಳವಣಿಗೆಯನ್ನು ತೋರಿಸಿದ್ದಾರೆ. ನವ್ಯದ ಸೂಕ್ಷ್ಮಸಂವೇದನಾಶೀಲತೆ ಇಲ್ಲಿಯೂ ಇದ್ದರೂ ಅದಕ್ಕೆ ದಟ್ಟವಾದ ಮೂರ್ತ ಸಾಮಾಜಿಕ ವಾಸ್ತವದ ಗಟ್ಟಿ ಬೆಂಬಲವಿರುವುದರಿಂದ 'ಭೇದ'ದಲ್ಲಿ ಆಗುವಂತೆ ಇಲ್ಲಿಯ ಸಂವೇದನಾಶೀಲತೆ ಕುಸಿದು ಬೀಳುವುದಿಲ್ಲ. ಶಿಕಾರಿಯಲ್ಲಿ ಬರುವ ಕಂಪನಿ ವ್ಯವಹಾರಗಳ ವ್ಯಾಪಾರಿ ಜಗತ್ತು ನವ್ಯದ ವಿಶಿಷ್ಟ ರೀತಿಯಲ್ಲಿ ವ್ಯಕ್ತಿಯ ಪ್ರಜ್ಞೆಯ ಮೇಲೆ ಮಾಡುವ ಆಘಾತಕ್ಕೆ ಸೀಮಿತವಾಗುತ್ತದೆ. ಆದರೆ ಪುರುಷೋತ್ತಮದಲ್ಲಿ ಅದು ಹಲವಾರು ವ್ಯಕ್ತಿಗಳನ್ನು ಕುಟುಂಬಗಳನ್ನು ಜೋಪಡಪಟ್ಟಿಗಳಂಥ ಸಮುದಾಯಗಳನ್ನೊಳಗೊಂಡು ವ್ಯಾಪಕವಾದ ಸಾಮಾಜಿಕ ಹೆಸರನ್ನು ಪಡೆದುಕೊಳ್ಳುತ್ತದೆ. ಹೀಗೆ ವ್ಯಕ್ತಿಪ್ರಜ್ಞೆ ಸಾಮಾಜಿಕ ಪ್ರಜ್ಞೆಗಳನ್ನು ಏಕಕಾಲಕ್ಕೆ ಹಿಡಿಯುವ ಮೂಲಕ ಕಾದಂಬರಿ ನವ್ಯ ಹಾಗೂ ಬಂಡಾಯದ ಉತ್ತಮ ಅಂಶಗಳನ್ನು ಒಟ್ಟಿಗೆ ತರುತ್ತದೆ.'' ಕಾದಂಬರಿಯನ್ನು ಓದಿದಾಗ ಔದ್ಯೋಗಿಕ ಜಗತ್ತಿನ ಕ್ರೂರ ಘರ್ಷಣೆಯ ಮೂಲಕ ಶಾಮ್ ಬೆನಗಲ್‌ರ 'ಕಲಿಯುಗ'ವನ್ನು ನೆನಪಿಗೆ ತರುವುದಲ್ಲದೆ,ಇಲ್ಲಿಯ ಕೆಲವು ಪಾತ್ರಗಳು ಬಿಡಿಯಾಗಿ ಮಹಾಭಾರತದ ಪಾತ್ರಗಳನ್ನು ನೆನಪಿಗೆ ತರುತ್ತವೆಯೆಂದೂ ಗಿರಡ್ಡಿಯವರು ಅಭಿಪ್ರಾಯಪಡುತ್ತಾರೆ.

ಎಚ್. ಎಸ್. ರಾಘವೇಂದ್ರರಾವ್ ಅವರು 'ಪುರುಷೋತ್ತಮ' ಕಾದಂಬರಿಯ ವಸ್ತು 'ಒಂದು ಸಮುದಾಯದ ಕಥೆ' ಎಂದು ಹೇಳಿದ್ದಾರೆ. ಇಲ್ಲಿಯೂ ಸಹ ಅವರು ಲೇಖಕರ ಸೃಜನಶೀಲತೆಯ ಬಗೆಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಅವರ ವಿಮರ್ಶಾ ನಿಲುವು ಹೀಗಿದೆ: ''ಅವರ (ಚಿತ್ತಾಲರ) ಪ್ರಮುಖ ಕಾಳಜಿಗಳೆಲ್ಲ ಏಕತ್ರ ಸಂಘಟಿಸಿರುವ, ಅವರ ಸೃಜನಶೀಲಚೈತನ್ಯವು ಮಡುಗಟ್ಟಿರುವ, ಮಹತ್ವಾಕಾಂಕ್ಷೆಯ ಕೃತಿಯಿದು. ಓದುಗರ ಮತ್ತು ವಿಮರ್ಶಕರ ಪ್ರತಿಕ್ರಿಯೆಯನ್ನು ಇನ್ನೂ ಪಡೆಯಬೇಕಾಗಿರುವ ಈ ಕಾದಂಬರಿ ಹಲವು ನೆಲೆಗಳನ್ನು ಒಳಗೊಂಡಿದೆ. ಮೊದಲನೆಯದಾಗಿ ತನ್ನ ಮನೆಯನ್ನು ಪ್ರೀತಿಸುವ ಮನುಷ್ಯನೊಬ್ಬ ಆ ಪ್ರೀತಿಯು ಕೊಟ್ಟ ಶಕ್ತಿಯಿಂದಲೇ, ಆಧುನಿಕ ಜಗತ್ತಿನ ವಿಕೃತಿಯ ಅಂತಿಮ ಪ್ರತಿಮೆಯಾದ ಹಣವನ್ನು ನಿರಾಕರಿಸುವ ಧೈರ್ಯ ತೋರಿಸುತ್ತಾನೆ. ಮನುಷ್ಯನ ಬದುಕಿನ ಸಾರ್ಥಕತೆಯಿರುವುದು ಯಾವ ಯಾವುದೋ ಕಾರಣಗಳಿಂದ ಪ್ರೀತಿಗೆ ಎರವಾದ ಜೀವಿಗಳಿಗೆ ಪ್ರೀತಿಯನ್ನು ನೀಡಿ ಅವುಗಳ ಬಾಳನ್ನು ತುಂಬುವುದರಲ್ಲಿಯೇ ಎನ್ನುವುದು

ಅವನು ಕಂಡುಕೊಂಡ ಸತ್ಯದ ಇನ್ನೊಂದು ಅಂಗ. ಇಂಥದೊಂದು ಬದುಕಿನ ಕಡೆಗೆ ಮುಖಮಾಡಿ ಹೊರಟವನಿಗೆ, ಅಹಂಅನ್ನು ಪೋಷಿಸುವಂಥ ಐಡೆಂಟಿಟಿಯ ಪ್ರಶ್ನೆಗಳೆಲ್ಲ ಗೌಣವಾಗಿ ಬಿಡುತ್ತವೆ. ನಾನು ಯಾರು ಎನ್ನುವುದಕ್ಕಿಂತ ನಾನು ಏನು ಮಾಡಬೇಕು ಎನ್ನುವುದು ಹೆಚ್ಚು ಮುಖ್ಯವಾದಾಗ ಬದುಕನ್ನು ನೋಡುವ ರೀತಿಯೇ ಬೇರೆಯಾಗಿ ಬಿಡುತ್ತದೆ.... ಕೃತಿಯ ಮೊದಲಿನಿಂದಲೂ ಧೀರನೂ ಉದಾತ್ತನೂ ಆದ ಇವನು (ಪುರುಷೋತ್ತಮ) ತನ್ನ ನೋವುಗಳಲ್ಲಿ ಮಗ್ನನಾಗದೆ ಇತರರ ವಿಷಾದಗಳನ್ನು ಕಡಿಮೆ ಮಾಡುವುದರಲ್ಲಿ ಆಸಕ್ತನಾಗಿರುತ್ತಾನೆ. ತನ್ನದೇ ಬದುಕಿನ ಸಿಕ್ಕುಗಳನ್ನು ತನ್ನ ಹಾಗೆಯೇ ಉದಾತ್ತರಾದ ಸದಾಶಿವ, ಸಾವಿತ್ರಿಯರ ನೆರವಿನಿಂದ ಬಿಡಿಸಿಕೊಳ್ಳುತ್ತಾನೆ. ಮನುಷ್ಯ ಜೀವನದಲ್ಲಿ ಕ್ರೌರ್ಯಕ್ಕೆ ಒಂದು ಸಾತತ್ಯ ಇರುವಂತೆ ಒಳ್ಳೆಯತನಕ್ಕೂ ಒಂದು ಸಾತತ್ಯ ಇದೆಯೆನ್ನುವ ಸಂಗತಿ ಮುತ್ತಜ್ಜನಿಂದ ಸರಸ್ವತಿಯವರೆಗೆ ಹರಡಿಕೊಂಡಿರುವ ಉದಾತ್ತತೆಯಿಂದ ಸ್ಪಷ್ಟವಾಗುತ್ತದೆ.

ಈ ಕಾದಂಬರಿಯ ಶಿಲ್ಪ ಹಿಂದಿನ ಕಾದಂಬರಿಗಳಿಗಿಂತ ಭಿನ್ನವಾದುದು. ಇದು ಮಹಾಕಾವ್ಯದ ಹಾಗೆ, ಮುಖ್ಯ ಕಥೆಗೆ ಅಂಟಿಯೂ ಅಂಟದಂಥ ಹಲವಾರು ಉಪಾಖ್ಯಾನಗಳನ್ನು ತನ್ನೊಳಗೆ ಅಡಕಮಾಡಿಕೊಂಡಿದೆ. ಮೇಲುನೋಟಕ್ಕೆ ಅನಿವಾರ್ಯವೆನ್ನಿಸದ ಈ ಹಲವು ಕಥೆಗಳು ಒಂದನ್ನು ಇನ್ನೊಂದು ಬೆಳಗಿಸುತ್ತಾ ಎಲ್ಲದರ ಅರ್ಥಪೂರ್ಣತೆಯನ್ನು ಹೆಚ್ಚಿಸುತ್ತವೆ. ಉದಾಹರಣೆಗೆ ಹೇಮಾ, ಸೀತೆ, ನೀಲಾ, ಕಲ್ಯಾಣಿ, ಎನೆಟ, ಕಮಲಾವತಿ ಹೀಗೆಯೇ ಬರುವ ಹತ್ತು ಹಲವು ಸ್ತ್ರೀ ಪಾತ್ರಗಳು ಸ್ವತಃ ತಾವೇ ಒಂದು ಕಾದಂಬರಿಯ ಕೇಂದ್ರವಾಗುವ ಸಾಧ್ಯತೆಗಳನ್ನು ಪಡೆದಿದ್ದರೂ ಮೂಲವಸ್ತುವಿಗೆ ಪೋಷಕರಾಗುತ್ತವೆ. ಮೇಲುನೋಟಕ್ಕೆ ಪುರುಷೋತ್ತಮನೇ ಕಾದಂಬರಿಯ ಪ್ರಧಾನಪಾತ್ರವೆಂದು ಭಾಸವಾದರೂ ಮತ್ತೊಂದು ನೆಲೆಯಲ್ಲಿ ಇದು ಹಲವು ನಾಯಕ ನಾಯಕಿಯರನ್ನು ಹೊಂದಿದೆ. ಎಲ್ಲರೂ ವಿಕಸನದ, ಪತನದ ಬೇರೆ ಬೇರೆ ಹಂತಗಳಲ್ಲಿ ಇರುವವರು. ಹೀಗಾಗಿ 'ಪುರುಷೋತ್ತಮ' ಒಂದು ಸಮುದಾಯದ ಕಥೆ. ವ್ಯಕ್ತಿಕೇಂದ್ರದಿಂದ ಹೊರಟು ಸಮಾಜದ ಗತಿಸ್ಥಿತಿಗಳನ್ನು ತನ್ನ ತೆಕ್ಕೆಗೆ ತಂದುಕೊಳ್ಳುವ ಕಥೆ.''

ಈ ಕಾದಂಬರಿಯು ಮಾನವ ಚೇತನದ ಊರ್ಧ್ವಮುಖೀ ಗತಿಯ ಸಫಲ ದಾಖಲೆಯಾಗಿದೆಯೆಂದು ಸಿ. ಎನ್. ರಾಮಚಂದ್ರನ್ ಅಭಿಪ್ರಾಯಪಟ್ಟು, ಇದರ ಕೆಲವು ಮಿತಿಗಳನ್ನು ಕಂಡು ಹಿಡಿದಿದ್ದಾರೆ. ''ಮುಖ್ಯವಾಗಿ ಪುರುಷೋತ್ತಮನ ಪೂರ್ವಜರ ಮತ್ತು ದಾಯಾದಿಗಳ ಕತೆ ಕಾದಂಬರಿಯ ಅಧಿಕಾಂಶವನ್ನು ಆವರಿಸಿರುವುದರಿಂದ ಪುರುಷೋತ್ತಮನ ಪಾತ್ರಕ್ಕೆ ಸಾಕಷ್ಟು ಒತ್ತು ಬೀಳದೆ ಕೊನೆಯಲ್ಲಿ ಅವನಲ್ಲುಂಟಾಗುವ ಅಸಾಧ್ಯ ಪರಿವರ್ತನೆ ಸ್ವಲ್ಪ ಅಸಹಜವೆಂದು ತೋರುತ್ತದೆ. ಹಾಗೆಯೇ ಕೃತಿಯ ಸಾಮಾಜಿಕ ಆಯಾಮ ಸಾಕಷ್ಟು ತಿಳಿಯದೇ (ನಗರೀಕರಣ-ಧನ ಹಾಗೂ ಅಧಿಕಾರ-ಅವುಗಳು ಬೆಳೆಸುವ ರಾಜಕೀಯ, ಇತ್ಯಾದಿ) ರಾಜಕಾರಣಿಯೊಬ್ಬನನ್ನು ಗುರಿಮಾಡುವುದು ಜವಾಬ್ದಾರಿಯುತ ನಿಲುವೆಂದು ಕಾಣುವುದಿಲ್ಲ. (ರಾಜಕಾರಣಿಯೂ

ಇತರರಂತೆ ಒಂದು ವ್ಯವಸ್ಥೆಯ ಬಲಿಪಶುವೆಂದು ಲೇಖಕರಿಗೇಕೆ ಕಾಣುವುದಿಲ್ಲ?) ಅಲ್ಲದೆ, ಚಿತ್ತಾಲರ ಹಿಂದಿನ ಕೃತಿಗಳಲ್ಲಿ ಕಂಡು ಬರದ, ಪದೇ ಪದೇ ಮುನ್ಸೂಚನೆಗಳನ್ನು ಕೊಟ್ಟು ಓದುಗರ ಕುತೂಹಲವನ್ನು ಕಾಯ್ದುಕೊಳ್ಳುವ ನಿರೂಪಣಾ ಪದ್ಧತಿ ಕಿರಿಕಿರಿಯನ್ನುಂಟು ಮಾಡುತ್ತದೆ.'' ಆದರೂ ಈ ಮಿತಿಗಳು ಗೌಣವೆಂದೇ ಹೇಳಬಹುದು.

ಹೀಗೆ ನಾಡಿನ ಹಲವು ವಿದ್ವಾಂಸರು ಚಿತ್ತಾಲರ ಕಾದಂಬರಿಗಳನ್ನು ವಿಭಿನ್ನ ನೆಲೆಗಳಿಂದ ನೋಡಿರುವುಮ ಮೇಲಿನ ಅಭಿಪ್ರಾಯಗಳು ಸಮರ್ಥಿಸುತ್ತವೆ.

**'ಸಾಹಿತ್ಯ, ಸೃಜನಶೀಲತೆ ಮತ್ತು ನಾನು'**

ಈ ಪ್ರಬಂಧ ಸಂಕಲನದ ಬಗ್ಗೆ ಎಚ್ಚೆಸ್ಕೆ, ಕೆ. ವಿ. ನಾರಾಯಣ, ಎಚ್. ಎಸ್ ರಾಘವೇಂದ್ರರಾವ್ ಮುಂತಾದವರು ಕೆಲವು ಮಾತುಗಳನ್ನಾಡಿದ್ದಾರೆ. ''ಈ ಸಂಕಲನದ ಮೊದಲನೆಯ ಭಾಗದ ಪ್ರಬಂಧಗಳು ಚಿತ್ತಾಲರ ವೈಯಕ್ತಿಕ ಸೃಷ್ಟಿಕಾರ್ಯಕ್ಕೆ ಸೊಡರು ಹಿಡಿಯುವಂತಿದ್ದರೆ, ಎರಡನೆಯ ಭಾಗವು ವಿಶೇಷವಾಗಿ ಲೇಖನದ ಹಾಗೂ ಸಮಾಜದ ನಡುವಣ ಸಂಬಂಧವನ್ನು ಕುರಿತಂಥವು. ಚಿತ್ತಾಲರು ಮುನ್ನುಡಿಯಲ್ಲಿ ಹೇಳಿಕೊಂಡಿರುವ 'ಪ್ರಬಂಧದಂಥ ಕಥೆ' ಅಥವಾ 'ಕಥೆಯಂಥ ಪ್ರಬಂಧ' ವನ್ನು ಕುರಿತ ಮಾತುಗಳು ಈ ಪ್ರಬಂಧಗಳಿಗೆ ಅಷ್ಟಾಗಿ ಅನ್ವಯಿಸುವುದಿಲ್ಲ. ಲೇಖಕರ ಸಾಹಿತ್ಯಕ ನಂಬಿಕೆಗಳು, ಸಾಹಿತ್ಯದ ಬಗೆಗಿನ ಅವರ ಅನಿಸಿಕೆಗಳು, ಸ್ವಾತಂತ್ರ್ಯ ಹಾಗೂ ಸರ್ವಾಧಿಕಾರಿಗಳ ನಡುವೆ ನಿಂತ ಲೇಖಕನ ನಿಲುವು, ಸಾಮಾನ್ಯಭಾಷೆ ಹಾಗೂ ಕಾವ್ಯಭಾಷೆ, ಕಥಾ ಸಾಹಿತ್ಯ ಮತ್ತು ತಂತ್ರ ಇವನ್ನು ಕುರಿತ ಲೇಖನಗಳು ಇವು. ಇವುಗಳ ಪೈಕಿ ಮನುಷ್ಯನ ಆಕ್ರಮಣಶೀಲತೆ ಹಾಗೂ ಕ್ರೌರ್ಯ ಎಂಬ ಪ್ರಬಂಧ ಸೃಜನಶೀಲತೆಯ ಸಾಮಾಜಿಕ ಮಹತ್ವವನ್ನು ಪ್ರಾಣಿವರ್ಗದಲ್ಲಿಕೂಡ ಕಾಣಸಿಗದಂಥ ಕಾರ್ಯದ ಕಡೆಗೆ ಮನುಷ್ಯ ಮುಖ ಮಾಡುತ್ತಿರುವುದನ್ನು ತಪ್ಪಿಸಲು ಸೃಜನಶೀಲತೆ ಹೇಗೆ ಅವಶ್ಯವೆಂಬುದನ್ನು ಲೇಖಕರು ವಿವರಿಸಿದ್ದಾರೆ'' ಎಂದು ಎಚ್ಚೆಸ್ಕೆಯವರು ಹೇಳಿದರೆ, ಕೆ. ವಿ. ನಾರಾಯಣ ಅವರು ''ಸೃಜನಶೀಲ ಲೇಖಕರೊಬ್ಬರು ಕೃತಿರಚನೆಯ ಹಿಂದಿರುವ ಪ್ರೇರಣೆಗಳನ್ನು ವಿವೇಚಿಸುವ ಸಂದರ್ಭಗಳು ಕನ್ನಡದಲ್ಲಿ ತೀರಾಕಡಿಮೆ. ಆ ಬಗೆಯ ಸಾಹಿತ್ಯಕ್ಕೆ ಇಲ್ಲಿನ ಟಿಪ್ಪಣಿಗಳು ಯೋಗ್ಯಸೇರ್ಪಡೆ. ಈ ಟಿಪ್ಪಣಿಗಳಲ್ಲಿ ಲೇಖಕರು ಮುಖ್ಯವಾಗಿ ಸಾಹಿತ್ಯದ ಜೀವನ ಸಂಯೋಜನಾ ಸಾಮರ್ಥ್ಯವನ್ನು ಅದರ ಸಾವಯವ ಸಂಘಟನಾ ನೆಲೆಗಳನ್ನು ಅನೂಹ್ಯ ಸಂಬಂಧ ರಚನಾ ಕೌಶಲ್ಯವನ್ನು ಸಂಬಂಧರಹಿತ ಘಟನೆಗಳ ಮುಖಾಮುಖಿಯಲ್ಲಿ ಹೊಸ ಸತ್ಯಗಳ ಹೊಳಹುಗಳನ್ನು ನೀಡುವ ಶಕ್ತಿಯನ್ನು ವಿವರಿಸಿದ್ದಾರೆ. ಈ ವಿವರಣೆಯು ರೋಚಕವೂ ಹೃದ್ಯವೂ ಆಗುವಂತೆ ನೋಡಿಕೊಂಡಿದ್ದಾರೆ'' ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಎಚ್. ಎಸ್. ರಾಘವೇಂದ್ರ ರಾವ್ ಅವರು ಈ ಸಂಕಲನದಲ್ಲಿ ಕಂಡು ಬರುವ ಕೆಲವು ಅಂಶಗಳನ್ನು ಗುರುತಿಸುತ್ತಾ ''ಸೃಜನಶೀಲನೊಬ್ಬ ಒಂದು ಕತೆ ತನ್ನ ಅಂತರಂಗದಲ್ಲಿನ ನಿಗೂಢ ಸೃಷ್ಟಿ ಪ್ರಕ್ರಿಯೆಯ ಕಡೆಗೆ ಮುಖ ಮಾಡಿ, ಇನ್ನೊಂದು ಕಡೆ

ತನ್ನ ಸಮಕಾಲೀನ ಸಾಹಿತ್ಯ ಸನ್ನಿವೇಶದ ನಾಡಿಬಡಿತಗಳನ್ನು ನಿರ್ಮಮವಾಗಿ ಪರಿಶೀಲಿಸುತ್ತಾ ಪಡೆದಿರುವ ಹಲವು ಒಳನೋಟಗಳನ್ನು ಇಲ್ಲಿ ನೋಡಬಹುದು. ಬೌದ್ಧಿಕವಾದ ಬರವಣಿಗೆಯಲ್ಲಿ ಹುಟ್ಟಬಹುದಾದ ವಾಚಾಳಿತನ ಅಥವಾ ಅತಿ ಆತ್ಮವಿಶ್ವಾಸಗಳನ್ನು ಕಡಿಮೆ ಮಾಡಲೆಂದು ಬಳಸಿರುವ ಅನುಭವನಿಷ್ಠ ನಿರೂಪಣ ವಿಧಾನ ಬರವಣಿಗೆಗೆ ಹೊಳಪನ್ನು ನೀಡಿದೆ. ಪುಸ್ತಕದ ಎರಡನೆಯ ಭಾಗದಲ್ಲಿ ಹೆಚ್ಚು ವಿಮರ್ಶಾತ್ಮಕವಾದ ಲೇಖನಗಳಿವೆ. ಇಲ್ಲಿಯೂ ಸಾಂಪ್ರದಾಯಿಕ ಅರ್ಥದ ವಿಮರ್ಶೆಯ ಬದಲಾಗಿ, ಇಡೀ ಪರಿಸರಕ್ಕೆ ಹೊಸ ಆಯಾಮಗಳನ್ನು ಕೊಡಬಲ್ಲ ಬೀಜರೂಪದ ವಿಚಾರಗಳನ್ನು ನೀಡಿದ್ದಾರೆ.''

ಹೀಗೆ ಯಶವಂತ ಚಿತ್ತಾಲರ ಒಟ್ಟು ಕೃತಿಗಳನ್ನು ವಿಮರ್ಶಕರು ಗ್ರಹಿಸಿದ ಅಂಶಗಳಿವು. ಇವುಗಳಲ್ಲಿ ವಸ್ತು, ತಂತ್ರ, ಶೈಲಿ, ಭಾಷೆ, ನಿರೂಪಣೆ, ಕಲಾತ್ಮಕತೆ, ವೈಚಾರಿಕತೆ, ಸೃಜನಶೀಲಗುಣ ಮುಂತಾದವುಗಳ ಬಗೆಗೆ ವಿವೇಚಿಸಿರುವುದನ್ನು ಕಾಣುತ್ತವೆ. ಅಲ್ಲಲ್ಲಿ ಲೇಖಕರ ಕೆಲವು ಮಿತಿಗಳನ್ನು ವಿಮರ್ಶಕರು ಗುರುತಿಸಿದ್ದಾರೆ. ಈ ವಿಮರ್ಶೆ, ಅಭಿಪ್ರಾಯಗಳಿಂದ ಚಿತ್ತಾಲರ ಸಾಹಿತ್ಯದ ಸಾಧನೆ, ಶ್ರೇಷ್ಠತೆ, ವಿಶಿಷ್ಟತೆಗಳೇನು? ಆ ಮೂಲಕ ಕನ್ನಡ ಸಾಹಿತ್ಯಕ್ಕೆ ಅವರು ಕೊಟ್ಟ ಕೊಡುಗೆಗಳ ಮಹತ್ವವನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆಂದು ಹೇಳಬಹುದು. ಚಿತ್ತಾಲರ ಒಂದು ಹೇಳಿಕೆಯನ್ನು ಸೂಚಿಸಿ ಈ ಕಿರುಪುಸ್ತಕವನ್ನು ಮುಕ್ತಾಯಗೊಳಿಸಬಹುದು : ''ಸಾಹಿತ್ಯದಿಂದ ನನಗೇನಾಗಿದೆ ಎನ್ನುವುದು ಸಾಹಿತ್ಯದಿಂದ ನಾನು ಏನು ಮಾಡಿಕೊಂಡಿದ್ದೇನೆ'' ಎನ್ನುವುದನ್ನು ಅವಲಂಭಿಸಿದೆ: ಮಾತ್ರವಲ್ಲ, ಮಾಡಿಕೊಳ್ಳುವ ಜವಾಬ್ದಾರಿ ನನ್ನದು ಎಂದು. ಸಾಹಿತ್ಯದ ಸೃಷ್ಟಿಕ್ರಿಯೆಯಲ್ಲಿ ನನ್ನನ್ನು ತೊಡಗಿಸಿಕೊಳ್ಳಲು ನಾನು ಸಿದ್ಧನಾಗದ ಹೊರತು ಸಾಹಿತ್ಯ ನನಗೇನೇನೂ ಮಾಡಲಾರದು ಎಂದು. ಸಾಹಿತ್ಯ, ಕುದುರೆಯನ್ನು ನೀರಿನ ತನಕ ಒಯ್ಯುವ ಕೆಲಸವನ್ನು ಮಾಡಬಹುದೇ ಹೊರತು ನೀರನ್ನು ಕುಡಿಸುವ ಕೆಲಸವನ್ನು ಅಲ್ಲ!''

# ಅನುಬಂಧ

## ಯಶವಂತ ಚಿತ್ತಾಲರ ಕೃತಿಗಳು

### ಕಥಾಸಂಕಲನಗಳು



### ಕಾದಂಬರಿಗಳು



### ಪ್ರಬಂಧ ಸಂಕಲನ

## ಹೆಚ್ಚಿನ ಓದು

**ಕೃತಿ ಸೂಚಿ**

೧. ಅಶೋಕ ಟಿ.ಪಿ., ಸಾಹಿತ್ಯ ಸಂಪರ್ಕ, ಅಕ್ಷರ ಪ್ರಕಾಶನ, ಸಾಗರ ೧೯೮೬

೨. ಆಮೂರ ಜಿ. ಎಸ್., ಅರ್ಥಲೋಕ. ಸ್ನೇಹ ಪ್ರಕಾಶನ, ಬೆಂಗಳೂರು೧೯೮೮

೩. ಕರೀಗೌಡ ಬೀಚನಹಳ್ಳಿ. ವ್ಯಷ್ಟಿ ಮತ್ತು ಸಮಷ್ಟಿ ಅಜಂತ ಪ್ರಕಾಶನ, ಬೆಂಗಳೂರು ೧೯೯೧

೪. ಗಿರಡ್ಡಿ ಗೋವಿಂದರಾಜ, ಕಾದಂಬರಿ : ವಸ್ತು ಮತ್ತು ತಂತ್ರ, ಸ್ನೇಹ ಪ್ರಕಾಶನ, ಬೆಂಗಳೂರು ೧೯೮೭

೫. ನಾಯಕ ಜಿ. ಎಚ್ (ಸಂ)ಕನ್ನಡ ಸಣ್ಣಕಥೆಗಳು ನ್ಯಾಷನಲ್ ಬುಕ್ ಟ್ರಸ್ಟ ನವದೆಹಲಿ೧೯೯೧

೬. ಭಟ್. ಜಿ. ಎಸ್(ಸಂ)ಯಶವಂತ ಚಿತ್ತಾಲ :ಕೆಲವು ಅಧ್ಯಯನಗಳು ಮಿತ್ರ ಪ್ರಕಾಶನ ಮೈಸೂರು೧೯೮೧

೭. ಶಿವರುದ್ರಪ್ಪ ಜಿ.ಎಸ್. (ಸಂ) ಸಾಹಿತ್ಯ ವಾರ್ಷಿಕ ೧೯೭೯,೧೯೮೦ ೧೯೮೧, ೧೯೮೩ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು

೮. ಶೇಷಗಿರಿರಾವ್. ಎಲ್. ಎಸ್(ಸಂ) ಕನ್ನಡ ಭಾರತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು೧೯೮೪* ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಉದಯಭಾನು ಕಲಾಸಂಘ ಬೆಂಗಳೂರು೧೯೯೩

೯. ಸಿದ್ದಲಿಂಗಯ್ಯ ಜಿ.ಎಸ್. ಮತ್ತು ಎಂ. ಎಚ್. ಕೃಷ್ಣಯ್ಯ(ಸಂ)ಸಾಲುದೀಪಗಳು ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು೧೯೯೦

**ಲೇಖನ ಸೂಚಿ**

೧. ಚಿತ್ತಾಲರ ಪುರುಷೋತ್ತಮ-ಮಾನವ ಚೇತನದ ಊರ್ಧ್ವಮುಖೀಗತಿಯ ಸಫಲ ದಾಖಲೆ, ಸಿ. ಎನ್. ರಾಮಚಂದ್ರನ್, ಸಾಹಿತ್ಯ ವಿಮರ್ಶೆ೧೯೯೦,ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು೧೯೯೨

೨. ಚಿತ್ತಾಲರ ಪುರುಷೋತ್ತಮ - ರಾಘವೇಂದ್ರ ಪಾಟೀಲ ವಾಗ್ವಾದ, ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ,೧೯೯೩

೩. ಯಶವಂತ ಚಿತ್ತಾಲರ 'ಸಿದ್ಧಾರ್ಥ'ಹುಡುಕಾಟದ ನೆಲೆ, ವಾಸುದೇವ ನಾಡಿಗ, ಶೂದ್ರ೧೯೯೩

೪. ಯಶವಂತ ಚಿತ್ತಾಲರೊಂದಿಗೆ ಒಂದು ಸಂದರ್ಶನ, ಸಂ. ಡಾ. ಬಸವರಾಜ ನಾಯ್ಕರ, ಕರ್ನಾಟಕ ಭಾರತಿ ೨೦-೨, ೧೯೮೭

೫. ಯಶವಂತ ಚಿತ್ತಾಲರು : ಒಂದು ಸಂದರ್ಶನ, ಜಯಂತ ಕಾಯ್ಕಿಣಿ, ಲಂಕೇಶ ಪತ್ರಿಕೆ ಸಂ : ೧೫ ಸಂ : ೩೨

೬. ಯಶವಂತ ಚಿತ್ತಾಲರ ಪುರುಷೋತ್ತಮ, ಜಯಂತ ಕಾಯ್ಕಿಣಿ, ಸಂಕ್ರಮಣ. ೨೧೬, ೧೯೯೦

೭. ಶಿಕಾರಿ : ಒಂದು ಪರಿಶೀಲನೆ, ರಹಮತ್ ತರೀಕೆರೆ, ಪ್ರಬುದ್ಧ ಕರ್ನಾಟಕ ೬೬-೧

೮. ಶಿಕಾರಿ : ಒಂದು ಸಮೀಕ್ಷೆ. ಡಿ. ಎ. ಶಂಕರ ಪುಸ್ತಕ ಪುರವಣಿ ೪-೧, ೧೯೮೦

೯. ಶಿಕಾರಿ:ಕಾದಂಬರಿ ಕುರಿತ ಲೇಖನಗಳು (ವಿಶೇಷ ಸಂಚಿಕೆ)ಅನ್ವೇಷಣೆ೧೯೭೯

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು